ಹಂಚಿನಾಳ ಹಿರೇಮಠದ

# ಶ್ರೀ ಗುರು ಪರಂಪರೆ



ಲೇಖಕರು: ಕೊಟ್ರಯ್ಯ ಮ. ಹಿರೇಮಠ

ಶ್ರೀ ಸಿದ್ಧಲಿಂಗೇಶ್ವರ ಧರ್ಮಸಾಹಿತ್ಯ ಪ್ರಕಾಶನ
ಹಂಚಿನಾಳ-೫೯೧ ೧೫೨

# HANCHINAL HIREMATHADA SHREE GURU PARAMPARE

Written and Published by :

**Shree Kotrayya M. Hiremath**
B.Sc., LL.B. (Spl).

Shree Siddhalingeshwar Dharma-
Sahitya Prakashana,
**Hanchinal-591 157**
Tal : Saundatti, Dist : Belgaum.

First Publication : **1991**
Copies : **1000.**

Price : **Rs. 10/—**

ಪ್ರಕಾಶಕರು :

ಶ್ರೀ ಕೊಟ್ರಯ್ಯ ಮ. ಹಿರೇಮಠ
ಶ್ರೀ ಸಿದ್ಧಲಿಂಗೇಶ್ವರ ಧರ್ಮ ಸಾಹಿತ್ಯ ಪ್ರಕಾಶನ,
ಹಂಚಿನಾಳ -೫೯೧ ೧೫೭
ತಾ|| ಸವದತ್ತಿ, ಜಿ|| ಬೆಳಗಾಂವ

ಪ್ರಥಮ ಮುದ್ರಣ : ೧೯೯೧
ಪ್ರತಿಗಳು : ೧೦೦೦.

ಬೆಲೆ : ಹತ್ತು ರೂಪಾಯಿಗಳು.

ಮುದ್ರಕರು :

ಅಶೋಕ ಪ್ರಿಂಟಿಂಗ ಪ್ರೆಸ್
ಬ್ಯಾಂಕ ರೋಡ ಗದಗ-೫೮೨ ೧೦೧.

|| ಶ್ರೀ ಜಗದ್ಗುರು ಪಂಚಾಚಾರ್ಯರ್ಃ ಪ್ರಸೀದಂತು ||

ಶ್ರೀ ವೀರಶೈವ ಮಹಾಮತ ಸ್ಥಾಪನಾಚಾರ್ಯ
ಶ್ರೀ ಜಗದ್ಗುರು ವಿಶ್ವಾರಾಧ್ಯ ಪರಂಪರಾಗತ ಜ್ಞಾನ ಸಿಂಹಾಸನಾಧೀಶ್ವರ
ಕಾವ್ಯ-ಸರ್ವದರ್ಶನ ತೀರ್ಥ, ವೇದಾಂತಾಚಾರ್ಯ, ವಿದ್ಯಾವಾರಿಧಿ,

ಶ್ರೀ ೧೦೦೮ ಜಗದ್ಗುರು ಡಾ|| ಚಂದ್ರಶೇಖರ ಶಿವಾಚಾರ್ಯ
ಭಗವತ್ಪಾದ ಮಹಾಸ್ವಾಮಿಗಳು

ಜಂಗಮವಾಡಿ ಮಠ, ಶ್ರೀ ಕ್ಷೇತ್ರ ಕಾಶಿ, ವಾರಾಣಸಿ (ಉ.ಪ್ರ.)

JANGAMAWADI MATH VARANASI 221 001 (U.P.)

(V. N. S., S. T. D. 0542 Phone No. 64402)

Ref. No. Camp : ನವನಗರ, ಹುಬ್ಬಳ್ಳಿ.

Date : ೩-೪-೧೯೯೧

# ಶುಭಾಶೀರ್ವಚನ ಸಂದೇಶ

ಧರ್ಮ ಸಂರಕ್ಷಣೆಗಾಗಿಯೇ ಧರ್ಮಪೀಠಗಳು ನಿರ್ಮಾಣಗೊಂಡಿವೆ. ಅಂತೆಯೇ ಈ ಪುಣ್ಯ ಭಾರತ ಭೂಮಿಯಲ್ಲಿ ಎಲ್ಲ ಮತಾಚಾರ್ಯರ ಪರಂಪರೆಗಳನ್ನು ನಾವಿಂದಿಗೂ ಕಾಣುತ್ತೇವೆ. ವೀರಶೈವ ಸಿದ್ಧಾಂತದಲ್ಲಿ ಶ್ರೀ ಜಗದ್ಗುರು ರೇಣುಕಾದಿ ಮಹಾಚಾರ್ಯರು ಮತಸ್ಥಾಪಕರಾಗಿ ಜನಮನದಲ್ಲಿ ಪ್ರಾತಃ ಸ್ಮರಣೀಯರಾಗಿದ್ದಾರೆ. ಇಡೀ ಮಾನವ ಜನಾಂಗದ ಒಳಿತಿಗಾಗಿ ಧರ್ಮಾಚಾರ್ಯರು ಶ್ರಮಿಸಿದ್ದನ್ನು ಮರೆಯುವಂತಿಲ್ಲ.

ಪಂಚಮಹಾಪೀಠಗಳಾದ ಶ್ರೀ ರಂಭಾಪುರೀ, ಉಜ್ಜಯಿನೀ, ಕೇದಾರ, ಶ್ರೀ ಶೈಲ ಮತ್ತು ಕಾಶೀ ಪೀಠಗಳು ವೀರಶೈವ ಧರ್ಮದ ಮೂಲನೆಲೆಗಳಾಗಿವೆ. ಇವುಗಳ ಪವಿತ್ರ ಪರಂಪರೆ ಗಂಗಾವಾಹಿನಿಯಾಗಿ ಅಂದಿನಿಂದ ಇವತ್ತಿನವರೆಗೂ ಸಾಗಿ ಬಂದು ಜನಮನದ ಅಜ್ಞಾನವನ್ನು ದೂರ ಮಾಡುತ್ತಿವೆ. ಈ ಪಂಚಪೀಠಗಳಲ್ಲಿ ಒಂದಾದ ಶ್ರೀ ಕಾಶೀ ಜ್ಞಾನಸಿಂಹಾಸನದ ಶಾಖಾಮಠ

ಗಳು ಅಖಂಡ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ,.........ಇತ್ಯಾದಿಗಳಲ್ಲಿ ವಿರಾಜಮಾನವಾಗಿವೆ. ಶಾಖಾ ಮಠಗಳಾದರೂ ಮಹಾಚಾರ್ಯರ ವಿಶ್ವ ಬಂಧುತ್ವ, ವಿಶಾಲ ತತ್ತ್ವಗಳನ್ನು ಬೋಧಿಸುತ್ತ ಸಾಮಾನ್ಯರ ಬದುಕಿನಲ್ಲಿ ನವ ಚೈತನ್ಯ ತುಂಬತಕ್ಕ ಗುರುಸ್ಥಾನಗಳಾಗಿವೆ. ಬೆಳಗಾಂವ ಜಿಲ್ಲೆ, ಸವ ದತ್ತಿ ತಾಲೂಕಿನ "ಹಂಚಿನಾಳ ಹಿರೇಮಠ"ವು ಮಹಾಪೀಠದ ಶಾಖಾಮಠ ವೆಂಬುದನ್ನು ತಿಳಿದು ಅತ್ಯಂತ ಸಂತೋಷವಾಯಿತು. ಈ ಮಠಕ್ಕೆ ಸಂಬಂಧ ಪಟ್ಟಂತೆ ಸವಿಸ್ತಾರವಾದ "ಗುರು ಪರಂಪರೆ"ಯ ಕೃತಿಯನ್ನು ಅದೇ ವಂಶ ದಲ್ಲಿ ಸಂಜನಿಸಿದ ಶ್ರೀ ವೇ. ಕೊಟ್ರಯ್ಯ ಮಹಾಲಿಂಗಯ್ಯ ಹಿರೇಮಠ ಇವರು ಬರೆದು ಪ್ರಕಾಶನಗೊಳಿಸುತ್ತಿರುವುದು ಹೆಮ್ಮೆಯ ಸಂಗತಿ. ಹಳ್ಯಾಳ ಶಿವಗಂಗಾ ಕ್ಷೇತ್ರದ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳ ಮೂಲಕ ಈ ಕೃತಿಯ ಹಸ್ತಪ್ರತಿಯು ಶ್ರೀ ಜ || || ಸನ್ನಿಧಿಗೆ ತಲುಪಿತು. ಈ ಕೃತಿಯ ತಿರುಳನ್ನು ಅರಿಯಲಾಗಿ ಈ ಮಠದ ಗುರುಗಳು ಪೂಜಾ ನಿಷ್ಠರಾಗಿ, ನಂಬಿದ ಭಕ್ತರ ಬಾಳ ಬುತ್ತಿಯಲ್ಲಿ ಸದಾ ಕಣ್ಮಣಿಗಳಾಗಿದ್ದ ತೋರಿಬರು ತ್ತದೆ. ಶ್ರೀ ಹಿರೇಮಠದ ಉನ್ನತ ಪರಂಪರೆಯು ಶ್ರೀ ಷ. ಬ್ರ. ಪಟದಯ್ಯ (ಮಹಾದೇವ) ಶಿವಾಚಾರ್ಯರ ನಂತರ ನಿಂತು ಹೋಗಿದ್ದು ವಿಷಾದ ತರುತ್ತದೆ. ಇನ್ನು ಮುಂದಾದರೂ ನಿಂತು ಹೋದ ಈ ಮಠದ ಪರಂಪರೆ ಮತ್ತೆ ಎಂದಿನಂತೆ ಬೆಳಗಿ ಬಾಳಲೆಂಬುದೇ ಸನ್ನಿಧಿಯ ಸದಿಚ್ಛೆಯಾಗಿದೆ. ಈ ಭಾಗದ ಧಾರ್ಮಿಕ ಕಾರ್ಯಕ್ರಮಗಳು ಜಾಗೃತವಾಗಿ ನಡೆಯುವುದರ ಜೊತೆಗೆ ಆಚಾರ್ಯ ಪರಂಪರೆ ಉಳಿದು ಬರಲು ಅವಕಾಶವಾಗುತ್ತದೆ. ಈ ನಿಟ್ಟಿನಲ್ಲಿ ಸಂಬಂಧ ಪಟ್ಟ ವಂಶಸ್ಥರು ಮತ್ತು ಶಿಷ್ಯರು ಚಿಂತಿಸಬೇಕೆಂಬುದಾಗಿ ಆಜ್ಞಾಪಿಸುತ್ತೇವೆ. ಈ ಕೃತಿ ರಚಿಸಿ ಸಮಾಜಕ್ಕೆ ಕೊಟ್ಟ ಶ್ರೀ ಕೊಟ್ರಯ್ಯ ನವರಿಗೆ ಶ್ರೀ ಜಗದ್ಗುರು ವಿಶ್ವಾರಾಧ್ಯರು ಮಂಗಲವನ್ನು ಅನುಗ್ರಹಿಸಲಿ.

ಇತ್ಯಾಶಿಷಃ

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

ಶ್ರೀ ಮದ್ವೀರಶೈವ ಮಹಾಮತ ಸಂಸ್ಥಾಪನಾಚಾರ್ಯ
ಶ್ರೀ ಜಗದ್ಗುರು ರೇಣುಕ ಮಹಾಚಾರ್ಯ
ಭವ್ಯ ಮಂಗಲ ಪರಂಪರಾನುಗತ
ಭದ್ರತರ ಭದ್ರಾತೀರ ಮಲಯಾಚಲ ಮಧ್ಯ ವಿದ್ಯೋತಮಾನ
ಸಾಕ್ಷಾದ್ಭೂಕೈಲಾಸ ಶ್ರೀ ಮದ್ರಂಭಾಪುರೀ
ವೀರ ಸಿಂಹಾಸನಾಧೀಶ್ವರ

**ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ**
**ವೀರ ರುದ್ರಮುನಿದೇವ ಶಿವಾಚಾರ್ಯ**
**ಭಗವತ್ಪಾದ ಮಹಾಸನ್ನಿಧಾನಂಗಳವರ**

# ಶುಭಾಶೀರ್ವಾದ ಸಂದೇಶ

ಭಾರತ ದೇಶದಲ್ಲಿರುವಷ್ಟು ಮತಧರ್ಮಗಳು ಬೇರಾವ ದೇಶದಲ್ಲೂ ಇಲ್ಲ. ಇಲ್ಲಿರುವ ಸಂಸ್ಕೃತಿ, ಪರಂಪರೆ ಪರಮಾದರ್ಶವಾದವುಗಳು. ಇವುಗಳ ಉಳಿವು ಉತ್ಕರ್ಷತೆಗಳ ಚಿಂತನ ಇಡೀ ಮಾನವ ಸಮಾಜದ ಮೇಲೆ ಸತ್ಪರಿಣಾಮವನ್ನು ಬೀರುತ್ತದೆ. ದಾರಿ ಹಲವಾದರೂ ಸೇರುವ ಗುರಿ ಒಂದೇ ಎಂಬುದನ್ನರಿತು ಭಾವಸಮನ್ವಯದ ಬದುಕನ್ನು ಮನುಷ್ಯ ರೂಪಿಸಿಕೊಳ್ಳುವುದರಲ್ಲಿಯೇ ಔಚಿತ್ಯವಿದೆ.

ಮಾನವ ಜೀವನದಲ್ಲಿ ಮೌಲ್ಯ ತುಂಬಿ ಬಂದಾಗಲೇ ಬದುಕು ಸಾರ್ಥಕವಾಗುವುದು. ಜೀವನದ ಹೆದ್ದಾರಿಯಲ್ಲಿ ಧರ್ಮಾಚರಣೆಯ ಪಾತ್ರ ಬಹಳ ದೊಡ್ಡದು. ನಾವು ನಡೆದು ಬಂದ ದಾರಿ ನಮ್ಮ ಮುಂದಿನ ಭವಿಷತ್ತನ್ನು ರೂಪಿಸುತ್ತದೆ. ಭಗವತ್ಪಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಅಹಿಂಸಾದಿ ಧ್ಯಾನ ಪರ್ಯಂತ ದಶಧರ್ಮ ಸೂತ್ರಗಳನ್ನು, ಸಮಗ್ರ

ಸಿದ್ಧಾಂತವನ್ನು ಮಾನವನ ಶ್ರೇಯಸ್ಸಿಗಾಗಿ ಅಗಸ್ತ್ಯ ಮುನಿಗಳಿಗ ಉಪ ದೇಶಿಸಿದರೆಂಬುದನ್ನು ಮರೆಯುವಂತಿಲ್ಲ.

ಮಾನವನ ಭ್ರಾಂತಿಯನ್ನು ಕಳೆದು ಶಾಂತಿ ಸಹನೆಯ ಗಿರಿಯನೇರಿ ನಿಜವಾದ ನೆಮ್ಮದಿಯನ್ನು ಪಡೆಯಲು ಪೀಠ-ಮಠಗಳ ಅವಶ್ಯಕತೆ ಇದೆ. ಈ ಪವಿತ್ರ ಮಹಾಚಾರ್ಯ ಪರಂಪರೆ ಪಾಚೀನ ಕಾಲದಿಂದ ಇಂದಿನವರೆಗೂ ಸಾಗಿ ಬಂದದ್ದು ಸರ್ವ ವಿಧಿತ. ಈ ಹಿನ್ನೆಲೆಯಲ್ಲಿ ಪಂಚಪೀಠಗಳ ಶಾಖಾ ಮಠಗಳು ಹಳ್ಳಿ-ಪಟ್ಟಣಗಳಲ್ಲಿ ಇದ್ದು ಜನತೆಯಲ್ಲಿ ಧಾರ್ಮಿಕ ಜಾಗೃತಿ ಯನ್ನು ಮೂಡಿಸುತ್ತ ಬಂದಿವೆ.

ಈ ದಾಽದೀಪ್ತಿಗಳಲ್ಲಿ "ಹಂಚಿನಾಳ ಹಿರೇಮಠ''ವು ಒಂದಾಗಿದೆ. ಈ ಮಠದ ಪರಂಪರೆ, ವಿಶಿಷ್ಟತೆಗಳು ಮಾನವನ ಮನದಲ್ಲಿ ಮಸಕಾಗದಂತೆ ಇವೆ. ಅಲ್ಲಿಯ ಪರಿಸರದ ಜನಾಂಗದ ಮೇಲೆ ತನ್ನದೇ ಆದ ಗುರುಭಕ್ತಿಯ ಮುದ್ರೆಯನ್ನೊತ್ತಿ ಶಿವಧರ್ಮ ಸಾಧಕರನ್ನಾಗಿ ಮಾಡಿದ ಅಗ್ಗಳಿಕೆ ಶ್ರೀ ಹಿರೇಮಠದ ಆಚಾರ್ಯರಿಗೆ ಸಲ್ಲುತ್ತದೆ. ಅನೇಕ ಸಂವತ್ಸರಗಳು ಸಂದು ಕುಂದುಂಟಾದ ಸಾಹಿತ್ಯವನ್ನು ರಕ್ಷಿಸಿಕೊಂಡು ಬಂದು ಅದೇ ವಂಶದಲ್ಲಿ ಜನಿಸಿದ ಶ್ರೀ ವೇ. ಕೊಟ್ರಯ್ಯನವರು ಅತ್ಯಲ್ಪ ಕಾಲದಲ್ಲಿ ಹಿರೇಮಠದ ಚಿಂತನವನ್ನು ಪುಸ್ತಕ ರೂಪದಲ್ಲಿ ಹೊರತರಬೇಕೆಂಬ ಹಂಬಲದಿಂದ ಶ್ರಮಿಸಿ, ಮುಕ್ತಾಯದ ಘಟ್ಟ ತಲುಪಿದ್ದು ಆನಂದಾಶ್ಚರ್ಯಕರ. ಅವರ ಶಿವಾಚಾರ್ಯ-ಚಿಂತನೆಯ ಸದ್ರೂಪ ಫಲವೇ ಈ ಕೃತಿ ಪುಷ್ಪವಾಗಿದೆ.

ಈ ಪುಸ್ತಕದ ಹಸ್ತ ಪ್ರತಿಯು ಶ್ರೀ ಜ॥ ।' ಸನ್ನಿಧಿಗೆ ಪೀಠಾಭಿಮಾನಿ ಗಳಾದ ಶಿವಗಂಗಾ-ಹಳ್ಯಾಳದ ಶ್ರೀ ಷ॥ ಬ್ರ॥ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳ ಮೂಲಕ ತಲುಪಿದಾಗ ಅದನ್ನು ವಿಹಂಗಮ ದೃಷ್ಟಿಯಿಂದ ಅವಲೋಕನಗೈದು ಸಮಾಧಾನವಾಯ್ತು. ವಕೀಲ ವೃತ್ತಿಯಲ್ಲಿದ್ದರೂ ಕೊಟ್ರಯ್ಯನವರು ಕಣ್ಮರೆಯಾಗುತ್ತಲಿದ್ದ ಶಿವಾಚಾರ್ಯ ಸಾಹಿತ್ಯ ಸಂಪ ತ್ತನ್ನು ನಾಡಿಗರ ಉಡಿಯಲ್ಲಿ ತುಂಬಿದ್ದಾರೆ. ಇದೇ ರೀತಿಯಾಗಿ ಅಲ್ಲಲ್ಲಿ ಅಪ್ರಕಟಿತವಾಗಿ ಉಳಿದಿರುವ ಆಚಾರ್ಯ ಸಾಹಿತ್ಯವನ್ನು ಹೊರತರುವಲ್ಲಿ

ಬುದ್ಧಿ ಜೀವಿಗಳು ಮುಂದಾಗಬೇಕೆಂಬುದೇ ಶ್ರೀ ಸನ್ನಿಧಿಯ ಹೃದಯಾಕಾಂಕ್ಷೆಯಾಗಿದೆ.

ಶ್ರೀ ಜಗಜ್ಜನನೀ ಜನಕರಾದ ಶ್ರೀ ಪಾರ್ವತೀ ಪರಮೇಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಕೃತಿ ಪುಷ್ಪ ರಚಿಸಿದ ಶ್ರೀ ಕೊಟ್ರಯ್ಯನವರಿಗೆ ಇತೋಪ್ಯಧಿಕವಾದ ಆಯುರಾರೋಗ್ಯ ಭಾಗ್ಯ ಸುಖ ಸಂಪತ್ತುಗಳನ್ನು ಅನುಗ್ರಹಿಸಲಿ.

ಶ್ರೀ ಬಾಳೆಹೊನ್ನೂರ ಪೀಠ
೨೫–೪–೧೯೯೧

ಇತ್ಯಾನಂತ ಶಿವಾಶಿಷಃ
ಸಮಸ್ತ ಸನ್ಮಂಗಳಾನಿ ಭವಂತು

॥ ಶ್ರೀ ಜಗದ್ಗುರು ಪಂಚಾಚಾರ್ಯರ್ಾ : ಪ್ರಸೀದಂತು ॥

ವೀರಶೈವ ಮತಾಂಬೋಧಿ । ಸಂವರ್ಧನ ಸುಧಾನಿಧೀಂ ।
ಸಿದ್ಧಲಿಂಗ ಶಿವಾಚಾರ್ಯಂ । ವಂದೇ ಶ್ರೀ ಜಗದ್ಗುರುಂ ॥

ಶ್ರೀಮದ್ ವಿಮಲ ವೀರಶೈವ ಮಹಾಮತ ಸ್ಥಾಪನಾಚಾರ್ಯ
ಶ್ರೀ ವಟಕ್ಷೇತ್ರ ಸಿದ್ಧೇಶ್ವರಲಿಂಗೋದ್ಭವ
ಶ್ರೀ ಜಗದ್ಗುರು ದಾರುಕಾಚಾರ್ಯ ಪರಂಪರಾಗತ
ಶ್ರೀ ಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ
**ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಮರುಳಾರಾಧ್ಯ**
**ಶಿವಾಚಾರ್ಯ ಭಗವತ್ಪಾದ**
**ಮಹಾಸ್ವಾಮಿಗಳವರ**

# ಶುಭ ಸಂದೇಶ

"ಹಂಚಿನಾಳ ಹಿರೇಮಠದ ಶ್ರೀ ಗುರು ಪರಂಪರೆ" ಎಂಬ ಕೃತಿಯ ಹಸ್ತ ಪ್ರತಿಯು ಸಿದ್ಧಲಿಂಗಶ್ರೀಗಳ ಮೂಲಕ ಶ್ರೀ ಸನ್ನಿಧಿಯವರಿಗೆ ತಲುಪಿದೆ. ಚರಿತ್ರೆಯನ್ನು ಓದಿ ಹರ್ಷ ತುಂಬಿ ಬಂತು. ಚರಿತ್ರೆಯ ಉದ್ದಗಲಕ್ಕೂ ಗುರುಮಹಿಮೆ ಆವರಿಸಿದೆ. ಗುರುವಿಲ್ಲದೇ ಯಾವ ಕಾರ್ಯವೂ ನಡೆಯದು. ಶ್ರೀ ಗುರುವಿನ ಅವಶ್ಯಕತೆ ಸಾಕಷ್ಟಿದೆ. ಆ ಮಹತ್ತರ ಉದ್ದೇಶದಿಂದಲೇ ಪೂರ್ವಾಚಾರ್ಯರು ಪೀಠಗಳನ್ನು ಮತ್ತು ಶಾಖಾ ಮಠಗಳನ್ನು ಸ್ಥಾಪಿಸಿ ತನ್ಮೂಲಕ ಜನ ಜಾಗೃತಿಯನ್ನು ಮಾಡಿದರು. ಅವರ ಆ ಧ್ಯೇಯೋದ್ದೇಶಗಳು ನಿಜವಾಗಿಯೂ ಮನುಕುಲದ ಕಲ್ಯಾಣಕ್ಕಾಗಿಯೇ ಎಂಬುದನ್ನು ಅಲಕ್ಷಿಸುವಂತಿಲ್ಲ.

ಸದರೀ ಹಿರೇಮಠದ ಪಟ್ಟಾಧ್ಯಕ್ಷರೆಲ್ಲರೂ ಆಚಾರ–ವಿಚಾರ ಸುಶೀಲರಾಗಿ ಬಾಳಿ ಹಳ್ಳಿಗಾಡಿನ ಭಕ್ತರ ಬಾಂದಳದಲ್ಲಿ ಭಕ್ತಿಯ ಶಕ್ತಿಯನ್ನು

ತುಂಬಿ ಜೀವಂತವಾಗಿದ್ದಾರೆ. ಅಂಥ ಮಠದ ಪರಂಪರೆಯನ್ನು ಕುರಿತು ಗ್ರಂಥ ರಚಿಸಿದ ಶ್ರೀ ವೇ. ಕೊಟ್ರಯ್ಯನವರ ಸಾಧನೆ ದೊಡ್ಡದು. ಈ ಪುಸ್ತಕವನ್ನು ಪ್ರತಿಯೊಬ್ಬರೂ ಓದಿ ಗುರುವಿನ ಮಹಿಮೆಯನ್ನು ತಿಳಿಯು ವಂತಾಗಲಿ. ಶ್ರೀ. ಕೆ. ಎಂ. ಹಿರೇಮಠ ಇವರಿಂದ ಇನ್ನೂ ಹೆಚ್ಚಿನ ಕೃತಿ ಗಳು ಹೊರಬರಲೆಂದು ಶ್ರೀ ಸನ್ನಿಧಿ ಅಪೇಕ್ಷಿಸುತ್ತದೆ.

ಶ್ರೀ ಜಗದ್ಗುರು ದಾರುಕಾಚಾರ್ಯರು ಹಾಗೂ ಮಹಾತಪಸ್ವಿ ಶ್ರೀ ಸಿದ್ಧಲಿಂಗ ಜಗದ್ಗುರುಗಳವರು ಸರ್ವರಿಗೂ ಮಂಗಲವನ್ನೀಯಲಿ.

**ದಿನಾಂಕ** **ಇತ್ಯಾನಂತ ಶಿವಾಶಿಷಃ**

೧೦-೪-೧೯೯೧

|| ಶ್ರೀ ಜಗದ್ಗುರು ಪಂಚಾಚಾರ್ಯಾ: ಪ್ರಸೀದಂತು ||

ಶ್ರೀ ಷ|| ಬ್ರ|| ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು
ಹುಬ್ಬಳ್ಳಿ-ಹಳ್ಯಾಳ-ಶಿವಗಂಗಾ ಕ್ಷೇತ್ರ
ಪಂಚಗೃಹ ಹಿರೇಮಠ
ಹಿರೇಪೇಟೆ, ಹಳೇಹುಬ್ಬಳ್ಳಿ-೨೪
ಧಾರವಾಡ ಜಿಲ್ಲೆ

# ಮುನ್ನುಡಿ

ಮೈಮೇಲೆ ಹರಕು ಬಟ್ಟೆಗಳಿದ್ದರೂ ಚಿಂತೆಯಿಲ್ಲ, ಕೈಯಲ್ಲೊಂದು ಪುಸ್ತಕವಿರಲಿ. —ಬಂಕಿಮ ಚಂದ್ರ.

ಧರ್ಮಕ್ಕೊಂದು ಸಂವಿಧಾನ ಇದೆ ; ನೆಲೆಗಟ್ಟಿದೆ. ಅದಕ್ಕೊಬ್ಬ ಶಿಲ್ಪಿ ಇದ್ದಾನೆ; ಚಿಂತಕರೂ ಇದ್ದಾರೆ. ಆ ಶಿಲ್ಪಿಗಳೇ ಶಿವಾಚಾರ್ಯರು, ಮಹಾ ಚಾರ್ಯರು. ಶಿವಾಚಾರ್ಯ ಸಂಸ್ಕೃತಿಯ ಪುನರುತ್ಥಾನವೇ ವೀರಶೈವ ಮೂಲನೆಲೆಯ ತಾಯ್ಮನೆ. ಜನಮನದ ಕಳೆ ಕಳೆದು ನಿರ್ಮಲ ಅಂತ: ಕರಣ ಮೂಡಿಸಿ ಸತ್ಫಲದ ಬೀಜವನ್ನು ಹಾಕುವುದೇ ಗುರುಧರ್ಮವಾಗಿದೆ. ಅರುವಿಗಾಗಿ ಕುರುಹು ಕೊಟ್ಟು ಮುಕ್ತಿಯ ನಿಲುವಿಗೇರಲು ಪ್ರೇರೇಪಿಸುವಾತ ಶ್ರೀ ಗುರು. ಅವನನ್ನು ಮರೆತು ಆವಿತರೆ ವಿನಾಶ ದೂರಿಲ್ಲ.

ಕನ್ನಡ ಭುವನೇಶ್ವರಿಯ ಗುಡಿಯಲ್ಲಿ ಅನಂತಾನಂತ ಮಹಿಮಾ ಪುರುಷರು ಸಂಜನಿಸಿ ನಾಡಿನ ದೀವಿಗೆಯಾಗಿದ್ದಾರೆ. ನಿರ್ಗತಿಕರ ಬಾಳಿನಲ್ಲಿ ನಂದದ, ಅಂದದ ಬೆಳಗನ್ನು ಕೊಟ್ಟಿದ್ದಾರೆ. ಅವರ ಆ ಸಾಧನೆಯನ್ನು ಯಾವತ್ತಿಗೂ ಯಾರೂ ಉಪೇಕ್ಷಿಸುವಂತಿಲ್ಲ.

ಶಿವಾಚಾರ್ಯ ಸತ್ಪರಂಪರೆಯಲ್ಲಿ ಬೆಳೆದು ಬಂದ ಮಠ ಹಂಚಿನಾಳ ಹಿರೇಮಠ. ಇದು ತನ್ನದೇ ಆದ ಪವಿತ್ರ ಶಕ್ತಿ ಸಾಮರ್ಥ್ಯ ಹೊಂದಿದೆ. ಹಂಚಿನಾಳ ಹಿರೇಮಠಕ್ಕೂ, ನಮ್ಮೀ ಪಂಚಗೃಹ ಹಿರೇಮಠಕ್ಕೂ ಆತ್ಮೀಯತೆಯ

ಸರಪಳಿ ಹೆಣೆದು ಬಂದಿದೆ. ಕಾಲದ ಚಕ್ರವಾಹಿನಿಯಲ್ಲಿ ಎರಡೂ ಮಠಗಳು ಮಸಕಾಗಿದ್ದವು. ಪೂರ್ವಜರ ಸತ್ಕರ್ಮದ ಫಲವಾಗಿ, ಮಹಾಚಾರ್ಯರ ಅನುಗ್ರಹ ಬಲದಿಂದ ಪಂಚಗೃಹ ಹಿರೇಮಠಕ್ಕೆ ಮುಸುಕಿದ ಮಂಜು ನಮ್ಮೀ ಗುರುತ್ವ ಪ್ರಾಪ್ತಿಯಿಂದ ದೂರಾಯಿತು. ಆದರೆ ಹಂಚಿನಾಳ ಹಿರೇಮಠದ ಗುರು ಪರಂಪರೆಯು ಕಾರಣಾಂತರಗಳಿಂದ ಮುಂದುವರಿಯಲಿಲ್ಲ. ಈ ಕೃತಿಯ ಅಂತರಾಳದಲ್ಲಿ ಎಲ್ಲವನ್ನೂ ತಿಳಿಯಲು ಅವಕಾಶ ಇದೆ.

ಹಂಚಿನಾಳ ಹಿರೇಮಠದ ಗುರು ಪರಂಪರೆಯಲ್ಲಿ ಆಗಿಹೋದ ಕೊನೆಯ ಐದು ಶಿವಾಚಾರ್ಯರ ಸಂಕ್ಷಿಪ್ತ ಚರಿತ್ರೆಯನ್ನು ಈ ಕೃತಿಯು ಒಳಗೊಂಡಿದೆ. ಈ ಎಲ್ಲ ಶಿವಾಚಾರ್ಯರೂ ಕ್ರಿಯಾಸಿದ್ಧಿಯುಳ್ಳವರು. ಅವರು ಗತಿಸಿ ಅದೆಷ್ಟೋ ವರುಷಗಳು ಉರುಳಿದರೂ ಅವರ ತಪಸ್ಸಿನ ಉಜ್ವಲ ಶಕ್ತಿ ಇವತ್ತಿಗೂ ಭಕ್ತ ಸಂಕುಲಕ್ಕೆ ವರದಾನವಾಗಿದೆ. ಶ್ರೀಗಳವರ ಜೀವಿತ ಕಾಲದ ಕಾಯಕ ನಿಷ್ಠೆ, ಸಜ್ಜನ ಶೀಲತೆ, ಜನಹಿತ ಸಾಧನೆಗಳು ಜನತೆಯ ಮನಸ್ಸಿನಿಂದ ಮರೆಯಾಗಿಲ್ಲ. ಹಳ್ಳಿಗಾಡಿನ ಮಣ್ಣಿನಲ್ಲಿ ಬೆಳೆದ ಮಕ್ಕಳಿಗೆ ಆದರ್ಶಮಯವಾದ ಸಂಹಿತೆಯೊಂದನ್ನು ನೀಡಿ ಉದ್ಧರಿಸಿದ ಶಿವಾಚಾರ್ಯ ಶಕ್ತಿಯಿದು.

ಇಂಥ ಮಠದ ಇತಿಹಾಸವು ಕೇವಲ ಬಾಯಿಂದ ಬಾಯಿಗೆ ಹೇಳುತ್ತಾ ಬಂದಂಥ ಕಾಲವೊಂದಿತ್ತು. ಈ ಪರಂಪರೆಯ ಜಾಡಿನಲ್ಲಿಯೇ ಹುಟ್ಟಿ ಬೆಳೆದ ಸಹೃದಯ ಶೀಲರಾದ ಶ್ರೀ ವೇ. ಕೊಟ್ರಯ್ಯನವರು ಹಿಂದಿನ ಶ್ರೀ ಮಹಾದೇವ (ಪಟದಜ್ಜ) ಶಿವಾಚಾರ್ಯ ಸ್ವಾಮಿಗಳವರ ಧರ್ಮಗ್ರಂಥಗಳ ಕಟ್ಟು ಬಿಚ್ಚಿ ಕಣ್ಣಾಡಿಸಿದಾಗ ಅವರಿಗಾದ ಸಂತೋಷ ಅಪಾರ. ಮರೆತು ಮಸಕಾಗುತ್ತಿದ್ದ ಹಿರೇಮಠದ ಪರಂಪರೆಯು ಮಠದ ಭಕ್ತ ಸಮೂಹಕ್ಕೆ ಸಿಗಲೆಂಬ ಮಹಾಕಾಂಕ್ಷೆಯಿಂದ ಬಹಳ ಶ್ರಮವಹಿಸಿ ಸೈದ್ಧಾಂತಿಕವಾದ ನೆಲೆಗಟ್ಟಿನ ಮೇಲೆ ಸುಭದ್ರವಾದ ಕೃತಿಯೊಂದನ್ನು ಕನ್ನಡಿಗರಿಗೆ ನೀಡಿದ್ದಾರೆ. "ಮಹಾತ್ಮರಂ ನೆನೆವುದೇ ಘನಮುಕ್ತಿ ಪದಂ ಶಿವಾಥವಾ" ಎಂಬ ಮಗ್ಗೆ ಮಾಯಿದೇವನ ಸೂಕ್ತಿಯಂತೆ ಕೊಟ್ರಯ್ಯನವರು ತಾವು ವಕೀಲ ವೃತ್ತಿಯಲ್ಲಿದ್ದರೂ ಸಹ ಹಿರಿಯ ಮಠದ ಮಹಾತ್ಮರನ್ನು ಕುರಿತು ಚಿಂತನ

ಮಾಡಿದ್ದಾರೆ. ಅವರ ಬಗೆಗೆ ಸುತ್ತಲಿನ ಪರಿಸರವು ತಿಳಿದುಕೊಳ್ಳುವಂತೆ ಮಾಡಿದ ಈ ಕಾರ್ಯ ಸಣ್ಣದಲ್ಲ.

ಈ ಕೃತಿಯ ಪ್ರಾರಂಭದಿಂದ ಅಚ್ಚಿನ ಮನೆಯವರೆಗೂ ಕೊಟ್ರಯ್ಯನವರು ನಮ್ಮ ಮಾರ್ಗದರ್ಶನ ಪಡೆದಿದ್ದಾರೆ. ಅವರ ಗುರುಭಕ್ತಿ, ನಿಷ್ಠೆ, ಆಚಾರ್ಯ ಸಂಹಿತೆ, ಪೂರ್ವಾಚಾರ್ಯರ ಮೇಲಿರುವ ಅಭಿಮಾನ ಎಂದೆಂದಿಗೂ ಮರೆಯಲಾರದವುಗಳು. ಈ ಕೃತಿ ಪುಷ್ಪ ಓದಿದಾಗ ಶ್ರೀ ಕೊಟ್ರಯ್ಯನವರ ಸಾಧನೆ ಸಹಜವಾಗಿ ಎಲ್ಲರಿಗೂ ತಿಳಿಯುತ್ತದೆ.

ಈ ಗುರು ಪರಂಪರೆಯ ಕೃತಿಯು ಹಿರೇಮಠದ ಮೇಲೆ ಒಂದು ವಿಶಿಷ್ಟವಾದ ಬೆಳಕು ಚೆಲ್ಲುತ್ತದೆ. ನಾಡಿಗರ ಮನದಲ್ಲಿ ಗುಪ್ತವಾಗಿದ್ದ ಭಕ್ತಿ ಜಾಗೃತಗೊಂಡು ತನ್ನತ್ತ ಸೆಳೆಯುವುದರಲ್ಲಿ ಸಂಶಯ ಇಲ್ಲ. ಶ್ರೀ ಕೊಟ್ರಯ್ಯನವರ ಬರಹದಲ್ಲಿ ಸಾತ್ವಿಕತೆಯ ಜೊತೆಗೆ ಯತಾರ್ಥ ವಿಚಾರಗಳ ಸಂಗಮ ಇದೆ. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಸಾಧನೆಯನ್ನು ಮಾಡಲಿಕ್ಕೆ ಸಾಕಷ್ಟು ಶಕ್ತಿ ಇದೆ ಎಂಬುದು ನಮಗೆ ಭಾಸವಾಗುತ್ತದೆ. ಅವರ ಸಾಹಿತ್ಯ ಸುಗಂಧ ಮಲ್ಲಿಗೆಯ ಕಂಪಿನಂತೆ ಅರಳಲಿ. ಆ ಎಲ್ಲ ಚೈತನ್ಯ ಶಕ್ತಿ ಸಿದ್ಧಿಯನ್ನು ಶ್ರೀ ಪಟದಪ್ಪಜ್ಜನವರು ಅವರಿಗೆ ಕರುಣಿಸಬಲ್ಲರೆಂಬುದರಲ್ಲಿ ಅನುಮಾನವೇ ಇಲ್ಲ.

ಇಂಥ ಅಮೂಲ್ಯ "ಹಂಚಿನಾಳ ಹಿರೇಮಠದ ಗುರು ಪರಂಪರೆ" ಯನ್ನು ಪ್ರತಿಯೊಬ್ಬರೂ ಓದಿ ಲೇಖಕರ ಸಾಧನೆಗೆ ಪ್ರೋತ್ಸಾಹಿಸುವರಾಗಬೇಕು. ಶ್ರೀ ಭಗವಂತನು ಹಾಗೂ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಕೃತಿಕರ್ತರಿಗೂ, ಭಕ್ತಸಂಕುಲಕ್ಕೂ ಮಂಗಲ ಪರಂಪರೆಯನ್ನು ದಯಪಾಲಿಸಲಿ.

ಮುಕ್ಕಾಂ : ಶಿವಗಂಗಾ ಕ್ಷೇತ್ರ

ದಿನಾಂಕ : ೧೯-೪-೧೯೯೧

# ನಲ್ನುಡಿ

ಭಾರತ ಭೂಮಿಯಲ್ಲಿ ಪ್ರತಿಯೊಂದು ಶತಮಾನದಲ್ಲಿ ಮನುಕುಲದುದ್ಧಾರಕ್ಕಾಗಿ ಪರಮಾತ್ಮನ ಸ್ವರೂಪ ದರ್ಶನ ಧರಿಸಿ, ಅವತರಿಸಿ ಬರುತ್ತಿರುವ ವಿಭೂತಿ ಪುರುಷರಿಗೆ ಸತ್ಪುರುಷರು, ಸಂತರು, ಶ್ರೀಗಳು ಅಂತಾ ಹಲವು ವಿಧವಾಗಿ ಕರೆಯಲಾಗಿದೆ. ಪುಣ್ಯಭೂಮಿ ಕರ್ನಾಟಕದಲ್ಲಿಯೂ ಹಲವರು ಅವತರಿಸಿ ಸರ್ವ ವಿಧದಿಂದ ಜನರುದ್ಧಾರ ಮಾಡಿದ ಸಂಗತಿಗಳು ಅಗಣಿತ. ಶ್ರೀ ರೇವಣಸಿದ್ಧರು, ಶ್ರೀ ಸಿದ್ಧರಾಮೇಶ್ವರರು, ಶ್ರೀ ನಿಜಗುಣರು, ಶ್ರೀ ಶರೀಫರು, ಶ್ರೀ ನಾಗಲಿಂಗ ಸ್ವಾಮಿಗಳು, ಶ್ರೀ ಮಡಿವಾಳೇಶ್ವರರು, ಶ್ರೀ ಗುರುಸಿದ್ಧೇಶ್ವರರು, ಶ್ರೀ ಅಲ್ಲಮ ಪ್ರಭುಗಳು, ಶ್ರೀ ಫಲಹಾರೇಶ್ವರರು, ಶ್ರೀ ಹೂಲಿ ಚರಮೂರ್ತಿಗಳು, ಶ್ರೀ ಸಿದ್ಧಾರೂಢರು, ಶ್ರೀ ಶಿವಾನಂದರು,........... ಮುಂತಾದವರು ಈ ಮಾಲಿಕೆಯಲ್ಲಿ ಪ್ರಮುಖರು. ಅವರ ಅಭಿಲಾಷೆ ಸರ್ವರೂ ಸುಖಿಗಳಾಗಬೇಕು ಎಂಬುದಾಗಿರುತ್ತದೆ. ಅದುವೇ ಅವರ ಇಚ್ಛೆಯೂ ಆಗಿರುತ್ತದೆ. ಅವರಂತೆ ನಮ್ಮ ಹಂಚಿನಾಳ ಗ್ರಾಮದಲ್ಲಿ ಜನಿಸಿ ಅವತರಿಸಿದ ಶ್ರೀ ಪರಮ ಪೂಜ್ಯ ಪಡದಪ್ಪಜ್ಜನವರು (ಶ್ರೀ ಷ. ಬ್ರ. ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು) ಎಲ್ಲ ಭಕ್ತರ ಉದ್ಧಾರಕ್ಕಾಗಿ ಹುಟ್ಟಿ, ವೇಷ ಭೂಷಣಕ್ಕಾಗಿ ಮಹತ್ವ ಕೊಡದೆ ಕಾಯಕ ಯೋಗಿಗಳಾಗಿದ್ದರು. ಅವರು ಕಾಯಕದಿಂದ ಬಂದ ಫಸಲನ್ನು ತಮ್ಮ ಅಂತರ್ ದೃಷ್ಟಿಯಿಂದ ತಿಳಿದು ಕಡು ಕಷ್ಟದಲ್ಲಿದ್ದ ದೀನದಲಿತರಿಗೆ ಜೋಳಿಗೆಯಿಂದ ತೆಗೆದು ಹಾಕಿ ಅವರ ಅವತ್ತಿನ ಕಷ್ಟವನ್ನು ದೂರಮಾಡಿ ಸಲುಹಿದ ತಂದೆ. ಅವರ ಜೋಳಿಗೆಯಲ್ಲಿನ ಹಿಟ್ಟನ್ನು ಊಟ ಮಾಡಿ ಎಷ್ಟೋ ಕುಟುಂಬಗಳು ಶ್ರೀಮಂತರಾದವರು ಉಂಟು. ಪೂಜ್ಯ ಪಡದಪ್ಪಜ್ಜನವರಂತವರು ಯುಗಕ್ಕೊಮ್ಮೆ ಜಗಕ್ಕೆ ಅವತರಿಸುವ ಅವತಾರಿ ಪುರುಷರು. ಇಂಥ ಮಹಾತ್ಮರ ಚರಿತ್ರೆಯನ್ನು ಬಹು ಸತ್ವಪೂರ್ಣವಾಗಿ

ಮತ್ತು ತತ್ತ್ವಪೂರ್ಣವಾಗಿ ವೇ. ಕೊಟ್ರಯ್ಯ ಮಹಾಲಿಂಗಯ್ಯ ಹಿರೇಮಠ ಇವರು ರಚಿಸಿದ್ದಾರೆ. ಈ ಸೊಗಸಾದ ಗ್ರಂಥವನ್ನು ಸರ್ವರೂ ಓದಿ ಅದ್ಯಯನ ಮಾಡಿ ಶ್ರೀ ಅಜ್ಜನವರ ದಿವ್ಯ ಚರಿತ್ರೆಯಿಂದ ಬೆಳಕನ್ನು ಪಡೆಯುವಂತಾಗಲೆಂದು ಮತ್ತು ಈ ಗ್ರಂಥದ ಸದುಪಯೋಗ ಸರ್ವರೂ ಸ್ವೀಕರಿಸಲೆಂದು ಹಾರೈಸುವೆ.

ಹಂಚಿನಾಳ
ದಿ. ೧೨-೪-೧೯೯೧

ರುದ್ರಪ್ಪ ಈರಪ್ಪ ಕಳಕಣ್ಣವರ
ನಿವೃತ್ತ ಪ್ರಧಾನ ಗುರುಗಳು,
ಕನ್ನಡ ಗಂಡು ಮಕ್ಕಳ ಶಾಲೆ,
ಹಂಚಿನಾಳ

|| ಶ್ರೀ ಗುರು ಪ್ರಸನ್ ||

# ಸದಭಿಪ್ರಾಯ

ಸರ್ವಶಕ್ತನಾಗಿರುವ ಸೃಷ್ಟಿಕರ್ತನ ಸಂಕಲ್ಪಾನುಸಾರವಾಗಿ, ವಿಶ್ವದ ಹಿತಕ್ಕಾಗಿ, ಧರ್ಮದ ಉಳಿವಿಗಾಗಿ ಶಿವಾಚಾರ್ಯರಂಥ ಪೂಜ್ಯರು ಸದ್ಗುರುಗಳಾಗಿ ಭೂಮಿಗಿಳಿದು ಶಿವಯೋಗ ಬೋಧಿಸುತ್ತಾರೆ. ಅಂಥ ಗುರುಪರಂಪರೆಯಲ್ಲಿ ಬಾಳಿ ಬೆಳಗಿದ ಶ್ರೀ ಗುರು ಪಡದಪ್ಪಜ್ಜನವರ ಐತಿಹಾಸಿಕ ಮಾಹಿತಿ ದೊರಕಿಸಿ, ಬೆಳಕಿಗೆ ತಂದು, ಜನ ಸಾಮಾನ್ಯರ ಜೀವನ ಸುಧಾರಣೆಗೆ ದಾರಿದೀಪವಾಗಬಲ್ಲ, ಭಕ್ತಿ ಭಾವದ ನೈಜ ಚಿತ್ರಣ ನೀಡುವ "ಹಂಚಿನಾಳ ಹಿರೇಮಠದ ಶ್ರೀ ಗುರು ಪರಂಪರೆ" ಎಂಬ ನಾಮಾಂಕಿತ ಹೊಂದಿದ ಈ ಪುಸ್ತಕವನ್ನು ಬರೆದ ಶ್ರೀ ಕೊಟ್ರಯ್ಯ ಮಹಾಲಿಂಗಯ್ಯ ಹಿರೇಮಠರವರು ಒಳ್ಳೆಯ ಶ್ರೇಷ್ಠ ಕೆಲಸಗೈದಿದ್ದಾರೆ.

ಸಂಪೂರ್ಣ ಶಿವಜ್ಞಾನವನ್ನು ಸಂಪಾದಿಸುವುದು ಜನಸಾಮಾನ್ಯರಾದ ನಮಗೆ ಕಠಿಣವಾದ ಕಾರ್ಯವೆನಿಸುತ್ತದೆ. ಆದಾಗ್ಯೂ ಗುರು ಪರಂಪರೆಯಿಂದ, ಗುರುಸಾನಿಧ್ಯದಿಂದ ಸುಲಭ ಮಾಡಿಕೊಳ್ಳಲು ಅವಕಾಶವುಂಟು. ಲೇಖಕರು ಹಿರೇಮಠದ ಗುರುಪರಂಪರೆಯ ಬಗ್ಗೆ, ಜೀರ್ಣವಾದ ಹಳೆಯ ಕಾಲದ ಪುಸ್ತಕ ಗಂಟಿನಲ್ಲಿದ್ದ ಅಮೂಲ್ಯವಾದ ವಿಷಯಗಳನ್ನು ಸಂಗ್ರಹಿಸಿದ್ದಾರೆ. ಒಂದು ವೇಳೆ ಲೇಖಕರ ದೃಷ್ಟಿಗೆ ತಮ್ಮ ಮನೆಯಲ್ಲಿಯ ಹಳೇ ಪುಸ್ತಕ ಗಂಟು ಗೋಚರಿಸದಿದ್ದರೆ ಎಂಥ ಪ್ರಮಾದವಾಗುತ್ತಿತ್ತು ! ಕಣ್ಮರೆಯಾಗಬಹುದಾಗಿದ್ದ ಇಂಥ ಗುರು ಪರಂಪರೆಯ ಐತಿಹಾಸಿಕ ಮಾಹಿತಿಯನ್ನು ಭಕ್ತರಿಗೆ ದೊರಕಿಸಿಕೊಟ್ಟ ಸದರೀಯವರ ಕಾರ್ಯ ಶ್ಲಾಘನೀಯವಾದದ್ದು. ಶ್ರೀ ಹಿರೇಮಠದ ಗುರು ಪರಂಪರೆಯನ್ನು ಐತಿಹಾಸಿಕವಾಗಿ ಹಳೆಯ ದಾಖಲೆಗಳು, ಪತ್ರ ವ್ಯವಹಾರಗಳು ಮುಂತಾದವುಗಳಿಂದ ಸಂಗ್ರಹಿಸಿ, ವಿಶೇಷವಾಗಿ ಪಡದಪ್ಪಜ್ಜನವರ ಜೀವನ ಚರಿತ್ರೆಯ ಅವಶೇಷವನ್ನು ಸಂಗ್ರಹಿಸಿ ಬೆಳಕಿಗೆ ತಂದಿದ್ದಾರೆ. ಜನಪದ ಭಾಷೆಯಲ್ಲಿರುವ ಪಡದಪ್ಪಜ್ಜನವರ ಪವಾಡಗಳ ಸಂಗ್ರಹ ಆಗಬೇಕಾದುದು ಅವಶ್ಯವಿದೆ. ಇಂಥ ಪುಣ್ಯ

ಪುರುಷರ ಗದ್ದುಗೆಯು ಈಗಲೂ ಅವರವರ ಭಾವಕ್ಕೆ ಅವರವರ ತೆರನಾಗಿ ಭಕ್ತಿಯಿಂದ ಬೇಡಿದವರ ಬೇಡಿಕೆಗಳನ್ನು ಈಡೇರಿಸುತ್ತ ಪರಿಸರವನ್ನೇ ಪಾವನ ಮಾಡುವುದರೊಂದಿಗೆ ಪಡದಪ್ಪಜ್ಜನ ಶ್ರೀ ಮಂದಿರವು ಹಂಚಿನಾಳದ ದಕ್ಷಿಣ ಭಾಗದಲ್ಲಿ ಕಂಗೊಳಿಸುತ್ತಿದೆ. ಲೇಖಕರು ವೃತ್ತಿಯಿಂದ ವಕೀಲರಾದರೂ ಸಹಿತ ಈ ಅಧ್ಯಾತ್ಮರಂಗದತ್ತ ತಮ್ಮ ಚಿತ್ತ ಹೊರಳಿಸಿ ಬಹಳ ಪ್ರಯತ್ನಿಸಿ, ಅಸಾಧ್ಯ ವಿಷಯ ಸಂಗ್ರಹಿಸಿ, ನಶಿಸಿ ಹೋಗಬಹುದಾದಂಥ ಹಂಚಿನಾಳ ಹಿರೇಮಠದ ಐತಿಹಾಸಿಕ ಮಾಹಿತಿಯನ್ನು "ಶ್ರೀ ಗುರು ಪರಂಪರೆ" ಎಂಬ ಕೈದೀವಿಗೆಯಲ್ಲಿ ಬರೆದು ಪ್ರಕಟಿಸಿದ್ದಾರೆ.

ಹಂಚಿನಾಳ ಹಿರೇಮಠದ ಶ್ರೀ ಗುರು ಪರಂಪರೆಯಲ್ಲಿ ಬಾಳಿ ಬೆಳಗಿ ಮನುಕುಲದ ದಾರಿದೀಪಗಳಾಗಿ ಕಂಗೊಳಿಸುತ್ತಿರುವ ಪೂಜ್ಯ ಶಿವಾಚಾರ್ಯರುಗಳ ಅದರಲ್ಲೂ ವಿಶೇಷವಾಗಿ ಪೂಜ್ಯ ಶ್ರೀ ಗುರು ಪಡದಪ್ಪಜ್ಜನವರ ಜೀವನ ಚರಿತ್ರೆಯನ್ನು ಒಳಗೊಂಡಿರುವ ಈ ಪುಸ್ತಕವು ಒಂದು ಪವಿತ್ರ ಗ್ರಂಥವಾಗಿರುವುದು. ಇದಿಷ್ಟೇ ಅಲ್ಲದೇ ಯಾವತ್ತೂ ಸದ್ಭಕ್ತರಿಗೆ ಗೊತ್ತಿರಲೇಬೇಕಾಗಿರುವ ಧರ್ಮದ ಮೂಲ ತತ್ತ್ವಗಳನ್ನು ಒಳಗೊಂಡಿರುವ ಈ ಗ್ರಂಥದ ಪೀಠಿಕಾ ಭಾಗವು ಯಾವತ್ತೂ ಸದ್ಭಕ್ತರಲ್ಲಿ ಶಿವಧರ್ಮವನ್ನು ಕುರಿತು ಸರಿಯಾದ ತಿಳುವಳಿಕೆಯನ್ನು ಮೂಡಿಸಿ, ಶಿವಭಕ್ತಿಯನ್ನು ಜಾಗೃತಗೊಳಿಸಿ, ಸನ್ಮಾರ್ಗವನ್ನು ತೋರುತ್ತದೆ. ಹೀಗಾಗಿ, ಸನ್ಮಾರ್ಗವನ್ನು ತೋರುವ ಈ ಪವಿತ್ರ ಗ್ರಂಥವು ಒಂದು ಸದ್ಗ್ರಂಥವಾಗಿರುತ್ತದೆ.

ಹಂಚಿನಾಳ
೧೩-೪-೧೯೯೧

**ಕೃಷ್ಣರಡ್ಡಿ ನಾಗರಡ್ಡಿ ಗಂಗಲ.**
ಪ್ರಧಾನ ಗುರುಗಳು
ಕನ್ನಡ ಹೆಣ್ಣು ಮಕ್ಕಳ ಶಾಲೆ,
ಹಂಚಿನಾಳ

|| ಓಂ ಸಿದ್ಧಲಿಂಗೇಶ್ವರಾಯ ನಮಃ ||

# — ಲೇಖಕರ ಮಾತು —

ತನ್ನ ಲೀಲೆಗೋಸುಗ ಸೃಷ್ಟಿ ನಿರ್ಮಾಣ ಮಾಡಿದ ಶಿವನು ಸೃಷ್ಟಿಯಲ್ಲಿ ಸಕಲ ಜೀವರಾಶಿಗಳೂ ಜೀವಿಸಲು ಅನುಕೂಲಕರವಾದ ಮತ್ತು ಯೋಗ್ಯವಾದ ಸರ್ವ ವಿಧದ ನಿಸರ್ಗ ಸಂಪತ್ತನ್ನು ಒದಗಿಸಿರುವನು. ಈ ಎಲ್ಲ ಸಂಪತ್ತನ್ನು ಅನುಭೋಗಿಸಿ ಸುಖಮಯವಾದ ಜೀವನವನ್ನು ನಡೆಸುವ ಮೂಲಭೂತವಾದ ಹಕ್ಕು ಸಕಲ ಮಾನವರಿಗೂ ಮತ್ತು ಎಲ್ಲ ಪ್ರಾಣಿಗಳಿಗೂ ಇರುತ್ತದೆ. ಸುಖಮಯವಾದ ಜೀವನವನ್ನು ಸಾಗಿಸಬೇಕೆಂಬುದೇ ಎಲ್ಲರ ಆಶೆ ಮತ್ತು ಉದ್ದೇಶವಾಗಿದೆ. ಸ್ವರ್ಗ ಮತ್ತು ನರಕಗಳು ಈ ವ್ಯಕ್ತ ಸೃಷ್ಟಿಯನ್ನು ಹೊರತುಪಡಿಸಿ ಬೇರೆ ಎಲ್ಲಿಯೂ ಇರುವದಿಲ್ಲ. ಈ ಜಗತ್ತನ್ನೇ ಸ್ವರ್ಗವನ್ನಾಗಿಸಿಕೊಳ್ಳುವುದು ಅಥವಾ ನರಕವನ್ನಾಗಿಸಿಕೊಳ್ಳುವುದು ನಮ್ಮ ಕೈಯಲ್ಲಿಯೇ ಇರುತ್ತದೆ. ಜಗತ್ತನ್ನು ನಡೆಯಿಸಿಕೊಂಡು ಹೋಗುತ್ತಿರುವ ಆ ಶಿವನ ಒಡೆತನವನ್ನು ಒಪ್ಪಿಕೊಂಡು, ಆತನಿಗೆ ಸಂಪೂರ್ಣ ಶರಣಾಗತರಾಗಿ, ಸದಾಕಾಲವೂ ಆತನ ನೆನಹಿನಲ್ಲಿ ಜೀವನವನ್ನು ನಡೆಯಿಸಿಕೊಂಡು ಹೋಗುವುದರಿಂದ ನಮ್ಮ ಬಾಳು ಬಂಗಾರವಾಗುವುದು. ನಮ್ಮಲ್ಲಿಯೂ, ಇತರರಲ್ಲಿಯೂ ಮತ್ತು ವಿಶ್ವದ ಪ್ರತಿಯೊಂದು ಜೈವಿಕ ಹಾಗೂ ಭೌತಿಕ ವಸ್ತುಗಳ ಕಣಕಣದಲ್ಲಿಯೂ ನೆಲೆಸಿರುವ ಆ ಚೈತನ್ಯಮಯನಾದ ಶಿವನನ್ನು ನಾವು ಯಾವ ಕಾಲದಲ್ಲಿಯೂ ಮರೆಯದಂತೆ ನಮ್ಮ ಜೀವನವನ್ನು ಸಾಗಿಸಿದರೆ ನಮ್ಮ ಜೀವನವು ಸುಖಮಯವಾಗುತ್ತದೆ. ಯಾವ ಕಾಲದಲ್ಲಿಯೂ ಆ ಶಿವನನ್ನು ಮರೆಯದಂತೆ ಜೀವನವನ್ನು ಸಾಗಿಸಬೇಕು ಎಂದರೆ ಆ ಶಿವನನ್ನು ಸ್ಮರಿಸುತ್ತ ಏನು ಬೇಕಾದರೂ ಮಾಡಿದರೆ ನಡೆಯುತ್ತದೆ ಎಂದು ಅರ್ಥವಲ್ಲ. ತಾನು ನಿರ್ಮಿಸಿದ ವಿಶ್ವವೆಂಬ ಈ ಕುಟುಂಬದ ಒಳಿತನ್ನೇ ಆ

ಶಿವನು ಸದಾವಕಾಲವೂ ಬಯಸುತ್ತಾನೆ ಎಂಬುದನ್ನು ನಾವೆಂದೂ ಮರೆಯು ಬಾರದು. ವಿಶ್ವವೇ ಒಂದು ಕುಟುಂಬ ಎಂದು ಯಾರು ತಿಳಿದು ನಡೆಯು ವರೋ ಅವರು ಆ ಶಿವನಿಗೆ ಅತ್ಯಂತ ಪ್ರೀಯರಾಗುತ್ತಾರೆ. ವಿಶ್ವವೆಂಬ ಈ ಕುಟುಂಬದ ಒಳಿತನ್ನು ಯಾರು ಬಯಸುವರೋ ಮತ್ತು ಅದಕ್ಕಾಗಿ ಯಾರು ಶ್ರಮಿಸುವರೋ ಅವರು ಆ ಶಿವನಿಗೆ ಅತ್ಯಂತ ಪ್ರೀಯರಾಗುತ್ತಾರೆ.

ವಿಶ್ವವೇ ಒಂದು ಕುಟುಂಬವೆಂದು ಈ ಕುಟುಂಬದ ಒಳಿತನ್ನು ಬಯಸುವವರು ಸ್ವಾರ್ಥ ಮತ್ತು ದ್ವೇಷಗಳಂತಹ ಸಂಕುಚಿತ ಭಾವನೆಗಳನ್ನು ಬಿಟ್ಟುಕೊಡಬೇಕಾಗುತ್ತದೆ. ಇಡೀ ಜಗತ್ತನ್ನೇ ನಾಶಪಡಿಸುವಂತಹ ಯಾವದೇ ಕಾರ್ಯಕ್ಕೆ ಕೈ ಹಾಕಬಾರದು. ಶಾಂತಿಯುತವಾದ ಸಹಕಾರ ಮತ್ತು ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ವ್ಯಕ್ತಿಯ ವೈಯಕ್ತಿಕ ಬಯಕೆಗಳು ಸಾರ್ವಜನಿಕ ಹಿತಕ್ಕೆ ಧಕ್ಕೆಯನ್ನುಂಟು ಮಾಡುವಂತಿರಬಾರದು. ಸಕಲ ಮಾನವರು ಮತ್ತು ಎಲ್ಲ ಪ್ರಾಣಿಗಳೂ ಸುಖದಿಂದ ಬದುಕುವ ಮೂಲಭೂತವಾದ ಹಕ್ಕನ್ನು ನಿಸರ್ಗದತ್ತವಾಗಿ ಪಡೆದುಕೊಂಡಿವೆ ಎಂಬ ಸತ್ಯವನ್ನು ನಾವು ಮನಗಾಣಬೇಕಾಗುತ್ತವೆ. ವಿಶ್ವ ವೆಂಬಈ ಕುಟುಂಬದ ಹಿತವನ್ನು ಬಯಸುವವರೇ ನಾವಾಗಿದ್ದರೆ ಯಾರೊಬ್ಬರ ಹಿತಕ್ಕೂ ಧಕ್ಕೆಯಾಗದಂತೆ ನಾವು ನಮ್ಮ ಹಿತವನ್ನು ಸಾಧಿಸಿಕೊಳ್ಳಬೇಕಾ ಗುತ್ತದೆ. ಸಾರ್ವಜನಿಕ ಹಿತದಲ್ಲಿಯೇ ವೈಯಕ್ತಿಕ ಹಿತವೂ ಅಡಕವಾಗಿದೆ ಎಂಬುದನ್ನು ಮನಗಂಡು ಸಾರ್ವತ್ರಿಕ ಹಿತಕ್ಕಾಗಿ ನಾವು ನಿಸ್ವಾರ್ಥ ಭಾವ ದಿಂದ ಶ್ರಮಿಸಬೇಕಾಗುತ್ತದೆ. ಈ ಕಾರಣಕ್ಕಾಗಿಯೇ ನೀತಿ ನಿಯಮಗಳ ಅವಶ್ಯಕತೆಯು ಇರುತ್ತದೆ. ಈ ರೀತಿಯ ಸಾರ್ವತ್ರಿಕ ಹಿತವನ್ನು ಸಾಧಿಸ ಬೇಕಾದರೆ ಸತ್ಯ ಅಹಿಂಸೆಯಂತಹ ನೀತಿ ನಿಯಮಗಳು ಅತೀ ಅವಶ್ಯವಾಗಿರು ತ್ತವೆ. ಸಹಕಾರ ಮತ್ತು ಮಾನವೀಯತೆಯಂತಹ ಗುಣ ವಿಶೇಷತೆಗಳು ಎಲ್ಲರಲ್ಲಿಯೂ ಇರಬೇಕಾಗುತ್ತದೆ. ಇಂತಹ ನೀತಿ ನಿಯಮಗಳು ಮತ್ತು ಮಾನವೀಯ ಮೌಲ್ಯಗಳು, ವ್ಯಕ್ತಿಗಳ ವೈಯಕ್ತಿಕ ಹಿತಾಸಕ್ತಿಗಳನ್ನು ನಿಯಂತ್ರಿಸಿ, ಅವುಗಳು ಪರಸ್ಪರ ತಾಕಲಾಡದಂತೆ ಮಾಡುವದರ ಮೂಲಕ ಮುಂದೆ ಸಂಭವಿಸಬಹುದಾದ ಘರ್ಷಣೆ

ಯನ್ನು ತಡೆಗಟ್ಟುತ್ತವೆ. ನಿಸರ್ಗ ನಿಯಮುಗಳನ್ನು ಚೆನ್ನಾಗಿ ತಿಳಿದು ಕೊಂಡು ನಿಸರ್ಗದೊಡನೆ ಸೂಕ್ತವಾದ ಹೊಂದಾಣಿಕೆಯನ್ನು ಸಂಪಾದಿಸಿ ಕೊಂಡು ವ್ಯಷ್ಟಿ (ವ್ಯಕ್ತಿ) ಹಾಗೂ ಸಮಷ್ಟಿ (ವಿಶ್ವ)ಗಳೆರಡರ ಹಿತವನ್ನೂ ಏಕಕಾಲಕ್ಕೆ ಸಾಧಿಸಬಲ್ಲ ಜೀವನ ರೀತಿಯನ್ನೇ "ಲಿಂಗಾಂಗ ಸಾಮರಸ್ಯ" ಎಂದು ಕರೆದಿರುವರು. ಕಾಯಕತತ್ತ್ವ ಮತ್ತು ದಾಸೋಹ ತತ್ತ್ವಗಳು ಈ ಲಿಂಗಾಂಗ ಸಾಮರಸ್ಯವನ್ನು ಸಾಧಿಸುವ ಉದ್ದೇಶದಿಂದಲೇ ಹುಟ್ಟಿ ಕೊಂಡಿವೆ. ಪ್ರತಿಯೊಬ್ಬ ವ್ಯಕ್ತಿಯು ಸತ್ಯ ಶುದ್ಧವಾದ ಕಾಯಕವನ್ನು ಮಾಡಿಯೇ ಹೊಟ್ಟೆ ತುಂಬಿಸಿಕೊಳ್ಳಬೇಕು ಎಂಬುದಾಗಿ ಕಾಯಕ ತತ್ತ್ವವು ಹೇಳಿದರೆ ಅನ್ನವಿದ್ದವನು ಅನ್ನವಿಲ್ಲದವನಿಗೆ ಅನ್ನ ನೀಡಬೇಕು ಮತ್ತು ಜ್ಞಾನ ವಿದ್ದವನು ಜ್ಞಾನವಿಲ್ಲದವನಿಗೆ ಜ್ಞಾನ ನೀಡಬೇಕು ಎಂಬುದಾಗಿ ದಾಸೋಹ ತತ್ತ್ವವು ಹೇಳುತ್ತದೆ. ಹೀಗೆ ಮಾಡುವುದರಿಂದ ಸ್ವಲ್ಪ ಮಟ್ಟಿನ ಸಮಾನತೆ ಯನ್ನು ನಾವು ಸಾಧಿಸಿದಂತಾಗುತ್ತದೆ.

ಎಲ್ಲಿಯವರೆಗೆ ಅನಾವಶ್ಯಕವಾದ ಅಸಮಾನತೆಗಳೂ, ಸುಳ್ಳು, ಮೋಸ, ಹಿಂಸೆ ಮುಂತಾದವುಗಳು ಅಸ್ತಿತ್ವದಲ್ಲಿ ಇರುವವೋ ಅಲ್ಲಿಯವರೆಗೆ ಲಿಂಗಾಂಗ ಸಾಮರಸ್ಯವು ಮೂಡಿ ಬರಲಾರದು. ವ್ಯಕ್ತಿಯ ಯಾವುದೇ ಒಂದು ಅಂಗವು ದುಃಖವನ್ನು ಅನುಭವಿಸುತ್ತಿದ್ದರೆ ಆ ವ್ಯಕ್ತಿಯು ಸುಖ ದಿಂದ ಇರಲು ಸಾಧ್ಯವಿಲ್ಲ. ಅದೇ ರೀತಿಯಾಗಿ ಅಂಗವೆಂದು ಗುರುತಿಸಲ್ಪ ಡುವ ಯಾವುದೇ ಒಬ್ಬ ವ್ಯಕ್ತಿಯು ಸೂಕ್ತವಾದ ರೀತಿಯಲ್ಲಿ ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸದೇ ಹೋದರೆ ಅಥವಾ ವಿನಾಶಕಾರಿ ಕಾರ್ಯದಲ್ಲಿ ತೊಡಗಿದರೆ ವ್ಯಕ್ತಿ ಮತ್ತು ವಿಶ್ವದ ನಡುವಿನ ಸಾಮರಸ್ಯವನ್ನು ಸೂಚಿಸುವ "ಲಿಂಗಾಂಗ ಸಾಮರಸ್ಯ"ವು ಮೂಡಿ ಬರಲಾರದು. ವೈಯಕ್ತಿಕವಾಗಿಯೂ ಮತ್ತು ಸಾಮೂಹಿಕವಾಗಿಯೂ ಎಲ್ಲರೂ ಲಿಂಗಾಂಗ ಸಾಮರಸ್ಯವನ್ನು ಸಾಧಿ ಸಿದಾಗಲೇ ವಿಶ್ವವೆಂಬ ಈ ಕುಟುಂಬಕ್ಕೆ ಒಳಿತಾಗುತ್ತದೆ. ಈ ಕುಟುಂಬದ ಒಳಿತಿನಲ್ಲಿಯೇ ನಮ್ಮೆಲ್ಲರ ಒಳಿತೂ ಇರುತ್ತದೆ ಇಡೀ ಮಾನವ ಕುಲದ ಒಳಿತನ್ನು ಮತ್ತು ನಿಸರ್ಗದ ಸೌಂದರ್ಯವನ್ನು ಸಾಧಿಸುವುದಕ್ಕಾಗಿಯೇ ಎಲ್ಲ ಧರ್ಮಗಳು ಹುಟ್ಟಿಕೊಂಡಿವೆ. ಯಾರು ಧರ್ಮವನ್ನು ಪಾಲಿಸುವರೋ ಅವ ರನ್ನು ಆ ಧರ್ಮವೇ ರಕ್ಷಿಸುತ್ತದೆ. ಆದ್ದರಿಂದ ಧರ್ಮವನ್ನು ಪಾಲಿಸುವುದೇ ನಮ್ಮೆಲ್ಲರ ಕರ್ತವ್ಯವಾಗಿರಬೇಕು. ವ್ಯಕ್ತಿಯ ವೈಯಕ್ತಿಕ ಹಿತವೂ ಮತ್ತು ವಿಶ್ವದ ಸಾರ್ವತ್ರಿಕ ಹಿತವೂ ಆ ಧರ್ಮಪಾಲನೆಯಿಂದಲೇ ಸಾಧ್ಯ. ಧರ್ಮ

ದಿಂದ ನಡೆದಾಗಲೇ ನಾವು ವಿಶ್ವವೆಂಬ ಈ ಕುಟುಂಬಕ್ಕೆ ಒಳಿತನ್ನು ಮಾಡಲು ಸಾಧ್ಯ. ಈ ಕುಟುಂಬಕ್ಕೆ ಒಳಿತನ್ನು ಮಾಡಿದಾಗಲೇ ನಾವು ಈ ಕುಟುಂಬದ ಒಡೆಯನಾದ ಆ ಶಿವನಿಗೆ ಪ್ರಿಯರಾಗುತ್ತೇವೆ.

ನಿಸರ್ಗದಲ್ಲಿ ಲಭ್ಯವಿರುವ ಎಲ್ಲ ಸುಖಭೋಗಗಳನ್ನು ಎಲ್ಲರೂ ಬಯಸುವರು. ನಿಸರ್ಗದತ್ತವಾದ ಯಾವುದೇ ಸುಖಭೋಗಗಳನ್ನು ಬಯಸಬಾರದು ಅಥವಾ ಅನುಭೋಗಿಸಬಾರದು ಎಂಬ ನಿಯಮವು ಎಲ್ಲಿಯೂ ಇಲ್ಲ. ಅಂತಹ ನಿಯಮವು ಇರಲು ಸಾಧ್ಯವಿಲ್ಲ ಎಂದು ಹೇಳಿದರೂ ಸಹ ತಪ್ಪಾಗಲಾರದು. ಆದರೆ ಮಾನವನ ದೇಹವು ತನ್ನದೇ ಆದ ಇತಿ ಮಿತಿಗಳನ್ನು ಹೊಂದಿರುತ್ತದೆ ಮತ್ತು ಸಾರ್ವಜನಿಕ ಹಿತಾಸಕ್ತಿಯು ವ್ಯಕ್ತಿಗಳ ಮೇಲೆ ಕೆಲವೊಂದು ನಿರ್ಬಂಧಗಳನ್ನು ಹೇರುತ್ತದೆ. ನಿಸರ್ಗ ನಿಯಮಕ್ಕನು ಗುಣವಾಗಿ ದೇಹವು ಎಲ್ಲವನ್ನು ಬಯಸುತ್ತದೆ. ಆದರೆ ದೇಹದ ಆರೋಗ್ಯ, ಅದರ ಸರಿಯಾದ ಬೆಳವಣಿಗೆ ಮತ್ತು ಸಮಾಜದ ಹಿತದ ದೃಷ್ಟಿಯಿಂದ ಪ್ರತಿಯೊಬ್ಬ ವ್ಯಕ್ತಿಯು ತನ್ನ ಮೇಲೆ ತಾನು ಸೂಕ್ತವಾದ ಸ್ವಯಂ ನಿಯಂತ್ರಣವನ್ನು ಸ್ಥಾಪಿಸಿಕೊಳ್ಳುವುದು ಅವಶ್ಯವಿರುತ್ತದೆ. ಇಂತಹ ಸೂಕ್ತವಾದ ನಿಯಂತ್ರಣವಿಲ್ಲದಿದ್ದರೆ ವ್ಯಕ್ತಿಯ ವೈಯಕ್ತಿಕ ಬಯಕೆಗಳು ಸಮಾಜದ ಸಾರ್ವತ್ರಿಕ ಬಯಕೆಗಳಿಗೆ ಅಡ್ಡಿಯನ್ನುಂಟು ಮಾಡಬಹುದಾಗಿದೆ. ಪ್ರಾಚೀನ ಕಾಲದಿಂದ ಬೆಳೆದು ಬಂದ ಹಲವು ಧರ್ಮಗಳು ಮತ್ತು ಆಧುನಿಕ ರಾಷ್ಟ್ರಗಳ ಕಾನೂನು ಪದ್ಧತಿಗಳು ಇಂತಹ ಸೂಕ್ತವಾದ ನಿಯಂತ್ರಣವನ್ನು ಎಲ್ಲರ ಮೇಲೂ ಸ್ಥಾಪಿಸಲು ಪ್ರಯತ್ನಿಸುತ್ತವೆ. ಇಂತಹ ನಿಯಂತ್ರಣವು ಬಹಳಷ್ಟು ಜನರಿಗೆ ರುಚಿಸುವದಿಲ್ಲ. ಇದಕ್ಕೆ ಮೂಲ ಕಾರಣವೆಂದರೆ ಅಜ್ಞಾನ. ಕೆಲವರು ನಿಯಂತ್ರಣ ಇರಬೇಕೆಂಬುದನ್ನು ಒಪ್ಪುವದೇ ಇಲ್ಲ. ಇಂತಹ ನಿಯಂತ್ರಣದಿಂದಲೇ ಸಾರ್ವತ್ರಿಕ ಹಾಗೂ ವೈಯಕ್ತಿಕ ಹಿತ ಸಾಧನೆಯು ಸಾಧ್ಯವಾಗುತ್ತದೆ ಎಂಬುದನ್ನು ಅವರು ನಂಬುವದಿಲ್ಲ. ಅಂತವರು ಸ್ವೇಚ್ಛಾಚಾರಿಗಳಾಗಿ ಬದುಕುವದನ್ನು ಇಷ್ಟಪಡುತ್ತಾರೆ. ಅಂತವರಿಂದ ಸಮಾಜಕ್ಕೆ, ರಾಷ್ಟ್ರಕ್ಕೆ ಮತ್ತು ವಿಶ್ವವೆಂಬ ಈ ಕುಟುಂಬಕ್ಕೆ ಅಪಾಯ ಉಂಟಾಗುವುದು ಖಂಡಿತ. ಕೆಲವರು ಇಂತಹ ನಿಯಂತ್ರಣದ ಅವಶ್ಯಕತೆಯನ್ನು ಒಪ್ಪುತ್ತಾರೆ

ಆದರೆ ಅದನ್ನು ಸಾಧಿಸುವ ಬಗೆಯನ್ನು ಅವರು ತಿಳಿದಿರುವದಿಲ್ಲ ಮತ್ತು ಅದರ ಬಗೆಗಿನ ಸರಿಯಾದ ತಿಳುವಳಿಕೆಯನ್ನು ಅವರು ಪಡೆದಿರುವದಿಲ್ಲ. ಇನ್ನು ಕೆಲವರಿಗೆ ಅತಿಯಾದ ಬಡತನದಿಂದಾಗಿ ತಮ್ಮ ದಿನನಿತ್ಯದ ಕನಿಷ್ಟ ಮಟ್ಟದ ಅವಶ್ಯಕತೆಯಾಗಿರುವ ನೀರು ಮತ್ತು ಆಹಾರ ಇವುಗಳನ್ನು ದೊರಕಿಸಿಕೊಂಡು ಇರುವುದೇ ಒಂದು ಸಮಸ್ಯೆಯಾಗಿರುತ್ತದೆ. ಅತಿಯಾದ ಬಡತನದಿಂದ ಬಳಲುವ ಇಂತವರಿಗೆ 'ವೈಯಕ್ತಿಕ ಹಿತ' 'ಸಾರ್ವಜನಿಕ ಹಿತ' 'ನಿಯಂತ್ರಣ' ಮುಂತಾದ ಈ ಶಬ್ದಗಳು ಅರ್ಥರಹಿತನಾದವುಗಳೆಂದು ಕಂಡು ಬಂದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಕೆಲವರಲ್ಲಿ ಅತಿಯಾದ ಜ್ಞಾನ; ಇನ್ನು ಕೆಲವರಲ್ಲಿ ಅತಿಯಾದ ಅಜ್ಞಾನ. ಕೆಲವರಲ್ಲಿ ಅತಿಯಾದ ಆರ್ಥಿಕ ಮತ್ತು ಭೌತಿಕ ಸಂಪತ್ತು; ಇನ್ನು ಕೆಲವರಲ್ಲಿ ಅತಿಯಾದ ಬಡತನ. ಇಂತಹ ಅನೇಕ ಅಸಮಾನತೆಗಳು ಧರ್ಮಗಳ ಮತ್ತು ಕಾನೂನು ಪದ್ಧತಿಗಳ ಯಶಸ್ಸಿಗೆ ಅಡ್ಡಿಯನ್ನುಂಟುಮಾಡುತ್ತವೆ. ಇದರಿಂದಾಗಿ ವಿಶ್ವವೆಂಬ ಈ ಕುಟುಂಬದ ಒಳಿತು ಕೇವಲ ಕನಸಾಗಿಯೇ ಉಳಿಯುತ್ತದೆ.

ಶಿವನು ಸರ್ವಶಕ್ತನಾಗಿರುವನು. ಅವನು ತಾನು ನಿರ್ಮಿಸಿದ ವಿಶ್ವವೆಂಬ ಈ ಕುಟುಂಬಕ್ಕೆ ಒಳಿತು ಉಂಟಾಗದೇ ಇರುವುದನ್ನು ಅಥವಾ ಅದಕ್ಕೆ ಕೆಡಕು ಉಂಟಾಗುತ್ತಿರುವುದನ್ನು ನೋಡುತ್ತ ಸುಮ್ಮನೆ ಕುಳಿತುಕೊಳ್ಳುವುದಿಲ್ಲ. ಕೆಲವು ವ್ಯಕ್ತಿಗಳ ಮುಖಾಂತರ ತನ್ನ ಅಧಿಕಾಂಶವನ್ನು ಈ ಭೂಮಿಗೆ ಕಳಿಸುತ್ತಾನೆ. ಆತನಿಂದ ಕಳಿಸಲ್ಪಟ್ಟ ಅಂತಹ ಕೆಲವೇ ಕೆಲವು ವ್ಯಕ್ತಿಗಳು ವಿಶ್ವವೆಂಬ ಈ ಕುಟುಂಬಕ್ಕೆ ಕೆಡಕುಂಟಾಗುತ್ತಿರುವುದನ್ನು ಕಂಡು ಮಮ್ಮಲ ಮರುಗುತ್ತಾರೆ. ಕೆಡಕನ್ನು ನಿವಾರಿಸುವ ಮತ್ತು ಒಳಿತನ್ನು ಉಂಟು ಮಾಡುವ ದಿಸೆಯಲ್ಲಿ ಅವರು ಶ್ರಮಿಸುತ್ತಾರೆ. ಇಲ್ಲಿರುವ ಅಸಮಾನತೆಗಳನ್ನು ಹೋಗಲಾಡಿಸುವುದಕ್ಕಾಗಿ ಪ್ರಯತ್ನಿಸುತ್ತಾರೆ. ಧರ್ಮದ ಅವಶ್ಯಕತೆಯನ್ನು ತಿಳಿಸಿ ಹೇಳುತ್ತಾರೆ. ಆಯಾ ಕಾಲಮಾನಕ್ಕೆ ತಕ್ಕಂತಹ ಹೊಸ ಹೊಸ ಸೂತ್ರಗಳನ್ನು ಧರ್ಮದಲ್ಲಿ ಅಳವಡಿಸುತ್ತಾರೆ. ಧರ್ಮವನ್ನು ಕುರಿತು ಸರಿಯಾದ ತಿಳುವಳಿಕೆಯನ್ನು ಎಲ್ಲರಿಗೂ ಒದಗಿಸಲು ಶ್ರಮಿಸುತ್ತಾರೆ. ಧರ್ಮವನ್ನು ಸ್ಥಾಪಿಸಬೇಕು, ಧರ್ಮದಿಂದಲೇ ಎಲ್ಲರ ಹಿತವು ಸಾಧ್ಯ ಎಂಬು

ದನ್ನು ಅವರು ಬಲವಾಗಿ ನಂಬಿರುತ್ತಾರೆ ಮತ್ತು ಆ ದಿಸೆಯಲ್ಲಿ ಅತಿಯಾದ ಆಸಕ್ತಿಯನ್ನು ಹೊಂದಿರುತ್ತಾರೆ. ಅಂತಹ ಶಿವಧೂತರು ಅಥವಾ ಶಿವನ ಅವತಾರಿಗಳು ತಮ್ಮ ವೈಯಕ್ತಿಕ ಹಿತಸಾಧನೆಯನ್ನು ಬದಿಗಿಟ್ಟು ಸಾರ್ವತ್ರಿಕ ಹಿತಾಸಕ್ತಿಯನ್ನು ಕಾಪಾಡುವುದಕ್ಕೆ ಮುಂದಾಗುತ್ತಾರೆ. ಈ ಕಾರಣದಿಂದಲೇ "ಶಿವಾಚಾರ್ಯ" ರೆಂದೆನಿಸಿಕೊಳ್ಳುವ ಅಂತಹ ಕೆಲವೇ ಕೆಲವು ವ್ಯಕ್ತಿಗಳು ಎಲ್ಲರ ಗೌರವಕ್ಕೂ ಪಾತ್ರರಾಗಿ ಪೂಜ್ಯರೆನಿಸಿಕೊಳ್ಳುತ್ತಾರೆ. ಷಟ್‌ಸ್ಥಲಗಳ ಮುಖಾಂತರವಾಗಿ ಕ್ರಮಿಸಿ ಲಿಂಗಾಂಗ ಸಾಮರಸ್ಯವನ್ನು ಸಾಧಿಸಿಕೊಳ್ಳುವ ಶಿವಯೋಗ ಮಾರ್ಗವನ್ನು ಶಿವಾಚಾರ್ಯರು ಬೋಧಿಸುತ್ತಾರೆ. ಈ ಕಾರಣ ದಿಂದಾಗಿ ಅವರನ್ನು "ಷಟ್‌ಸ್ಥಲ ಬ್ರಹ್ಮ" ಎಂದು ಕರೆಯುತ್ತಾರೆ.ಶಿವಯೋಗವನ್ನು ಬೋಧಿಸುವ ಅವರು ಗುರುಗಳು. ಅಂತಹ ಗುರುಗಳ ಪರಂಪರೆಗೆ ಸಂಬಂಧಿಸಿದ ಐತಿಹಾಸಿಕ ಮಾಹಿತಿಯನ್ನು ಸಂಗ್ರಹಿಸಿ, ಆ ಮೂಲಕ ಶ್ರೀ ಗುರುವಿನ ಸದ್ಭಕ್ತರಿಗೆ ಅವರುಗಳ ಅಧಿಕೃತ ಪರಿಚಯವನ್ನು ಮಾಡಿಕೊಡುವ ಈ ಗುರುಸೇವಾ ಕಾರ್ಯವು ಜನ ಸಾಮಾನ್ಯನಾಗಿರುವ ನನ್ನ ಪಾಲಿಗೆ ಒದಗಿರುವ ಮಹಾಭಾಗ್ಯವೆಂದು ನಾನು ಭಾವಿಸುತ್ತೇನೆ. ಈ ಪುಸ್ತಕದಲ್ಲಿ ಸಂಗ್ರಹಿಸಲ್ಪಟ್ಟಿರುವ ಐತಿಹಾಸಿಕ ಮಾಹಿತಿಯು ಬೆಳಗಾಂವ ಜಿಲ್ಲೆಯ, ಸವದತ್ತಿ ತಾಲೂಕಿನ, ಹಂಚಿನಾಳ ಗ್ರಾಮದ ಶ್ರೀ ಹಿರೇಮಠದ ಗುರು ಪರಂಪರೆಯನ್ನು ಕುರಿತು ಇರುತ್ತದೆ.

ಈ ಪುಸ್ತಕದ ರಚನೆ ಮತ್ತು ಪ್ರಕಟನೆಯ ಕಾರ್ಯದಲ್ಲಿ ನೆರವಾಗಿರುವವರು ಹಲವು ಜನ. ಅವರಲ್ಲಿ ಹಳೇ ಹುಬ್ಬಳ್ಳಿಯ ಪಂಚಗೃಹ ಹಿರೇಮಠದ ಶ್ರೀ ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಪ್ರಮುಖರು. ಲಿಂಗೈಕ್ಯ ಶ್ರೀ ಗುರು ಪಟದಪ್ಪಜ್ಜನವರ ಕಾಲದ ಹಳೇ ಪುಸ್ತಕಗಳ ಗಂಟಿನಲ್ಲಿ ದೊರೆತ ಮಾಹಿತಿಯ ಆಧಾರದ ಮೇಲಿಂದ ನನಗೆ ಇವರ ಪರಿಚಯವಾದದ್ದು ನನ್ನ ಸುದೈವ. ಇವರು ೧೯೮೪ ನೇ ಇಸ್ವಿಯಿಂದ ೧೯೮೭ ನೇ ಇಸ್ವಿಯ ತನಕ ''ಅಮರ ಜೀವನ'' ಎಂಬ ಧಾರ್ಮಿಕ ಮಾಸ ಪತ್ರಿಕೆಯ ಸಂಪಾದಕರಾಗಿ ಕಾರ್ಯ ನಿರ್ವಹಿಸಿರುವರು. ಹಲವಾರು ಧಾರ್ಮಿಕ

ಪುಸ್ತಕಗಳನ್ನೂ ಸಹ ಬರೆದು ಪ್ರಕಟಿಸಿರುವ ಇವರು ಸಧ್ಯಕ್ಕೆ ಹಳೇಹುಬ್ಬಳ್ಳಿ, ಹಳ್ಳಿಯಾಳ, ಮತ್ತು ಬೆಂಗಳೂರ ಜಿಲ್ಲೆಯ ಶಿವಗಂಗಾ ಕ್ಷೇತ್ರಗಳಲ್ಲಿನ ಮಠಗಳ ಅಧಿಕಾರದ ಹೊಣೆ ಹೊತ್ತು ಬಿಡುವಿಲ್ಲದಂತೆ ಕಾರ್ಯ ಮಾಡುತ್ತಿರುವರು. ಈ ಪುಸ್ತಕವನ್ನು ಬರೆಯುವ ಸಮಯದಲ್ಲಿ ನಾನು ಅನೇಕ ಮಹತ್ವದ ವಿಷಯಗಳನ್ನು ಕುರಿತು ಇವರ ಒಪ್ಪಿಗೆಯನ್ನು ಪಡೆದುಕೊಂಡಿರುವೆನು ಇವರು ಈ ಕೃತಿಯ ಹಸ್ತಪ್ರತಿಯನ್ನು ಸಂಪೂರ್ಣ ಓದಿ ಸೂಕ್ತವಾದ ತಿದ್ದುಪಡಿಗಳನ್ನು ಮಂಡಿಸಿ "ಶ್ರೀ ಸಿದ್ಧಲಿಂಗೇಶ್ವರ ಧರ್ಮ ಸಾಹಿತ್ಯ ಪ್ರಕಾಶನ" ಎಂಬ ಹೆಸರನ್ನು ಸೂಚಿಸಿರುವರಷ್ಟೇ ಅಲ್ಲದೇ ಈ ಕೃತಿಯು ಮುದ್ರಿಸಲ್ಪಟ್ಟು ಬಲು ಬೇಗನೇ ಜನಸಾಮಾನ್ಯರ ಕೈಗೆ ಓದಿಗೆ ಸಿಗಲಿ ಎಂಬುದಾಗಿ ಅಂತಃಕರಣ ಪೂರ್ವಕವಾಗಿ ಹಾರೈಸಿ ಆಶೀರ್ವದಿಸಿದರು. ನನ್ನ ಬೇಡಿಕೆಯನ್ನು ಮನ್ನಿಸಿ ಈ ಕೃತಿಗಾಗಿ ಮುನ್ನುಡಿಯನ್ನು ದಯಪಾಲಿಸಿರುವರಲ್ಲದೇ ಪಂಚಮಹಾಪೀಠಗಳ ಶ್ರೀ ಜಗದ್ಗುರುಗಳವರ ಮಹಾಸನ್ನಿಧಿಗೆ ಈ ಸಾಹಿತ್ಯ ಕೃತಿಯ ಪರಿಚಯವನ್ನು ಮಾಡಿಕೊಟ್ಟು ಮಹಾಸ್ವಾಮಿಗಳವರ ಸನ್ನಿಧಾನದಿಂದ ಈ ಕೃತಿಗಾಗಿ "ಶುಭಾಶೀರ್ವಾದ ಸಂದೇಶ"ಗಳನ್ನು ಸಹಿತ ಪಡೆದುಕೊಂಡು ಬಂದಿರುವರು. ಇದೂ ಅಲ್ಲದೇ ಈ ಕೃತಿಯ ಪ್ರಕಟನಾ ಕಾರ್ಯದಲ್ಲಿ ಮಾರ್ಗದರ್ಶನ ಮಾಡುವಂತೆ ಗದುಗಿನ ವಿಜಯಾ ಬುಕ್ ಡಿಪೋದ ಮಾಲಿಕರಾದ ಶ್ರೀಯುತ ಎಸ್. ಟಿ. ಹಿರೇಮಠರವರಿಗೆ ಅಪ್ಪಣೆ ಕೊಡಿಸಿದರು. ಒಟ್ಟಿನಲ್ಲಿ ಹಳೇಹುಬ್ಬಳ್ಳಿಯ ಪೂಜ್ಯ ಶ್ರೀಗಳವರ ಆಶೀರ್ವಾದ ಬಲವೇ ನನ್ನ ಈ ಗುರುಸೇವಾ ಕಾರ್ಯವು ಯಶಸ್ವಿಯಾಗಲು ಪ್ರಮುಖ ಕಾರಣವಾಗಿರುವುದು. ಶ್ರೀ ಕಾಶೀ, ಶ್ರೀ ರಂಭಾಪುರೀ, ಮತ್ತು ಶ್ರೀ ಉಜ್ಜಯಿನಿಯ ಶ್ರೀ ಜಗದ್ಗುರು ಪೀಠಗಳ ಸಿಂಹಾಸನಾಧೀಶ್ವರರ ಮತ್ತು ಹಳೇಹುಬ್ಬಳ್ಳಿಯ ಪಂಚಗೃಹ ಹಿರೇಮಠದ ಶ್ರೀ ಗುರು ಸಿದ್ಧಲಿಂಗ ಶಿವಾಚಾರ್ಯರ ಪಾದಾರವಿಂದಗಳಲ್ಲಿ ನನ್ನ ಅನಂತ ಭಕ್ತಿಯ ಶಿರಸಾಷ್ಟಾಂಗ ಪ್ರಣಾಮಪುಷ್ಪಗಳನ್ನು ಸಮರ್ಪಿಸುತ್ತೇನೆ.

ಈ ಕಾರ್ಯದಲ್ಲಿ ನೆರವಾಗಿರುವ ಇನ್ನೂ ಕೆಲವು ವ್ಯಕ್ತಿಗಳನ್ನು ನಾನೀ ಸಂದರ್ಭದಲ್ಲಿ ಸ್ಮರಿಸಿಕೊಳ್ಳಲೇಬೇಕು. ಈ ಪುಸ್ತಕದ ಪೀಠಿಕಾ ಭಾಗ

ದಲ್ಲಿರುವ ‹‹ಧರ್ಮಗಳು ಮತ್ತು ನಮ್ಮ ಸಂವಿಧಾನ" ಎಂಬ ವಿಷಯವನ್ನು ಕರ್ನಾಟಕ ವಿಶ್ವವಿದ್ಯಾಲಯ ಕಾನೂನು ಮಹಾವಿದ್ಯಾಲಯದಲ್ಲಿ ನಮ್ಮ ನೆಚ್ಚಿನ ಗುರುಗಳಾಗಿದ್ದ ಮತ್ತು ಈಗ ಅದೇ ಕಾನೂನು ಮಹಾವಿದ್ಯಾಲಯದ ಪ್ರಾಚಾರ್ಯರಾಗಿರುವ ಪ್ರೊ॥ ಎಸ್. ಎಸ್. ಆಲೂರ ಇವರಿಗೆ ತೋರಿಸಿದಾಗ ಅವರು ಅದನ್ನು ಮೆಚ್ಚಿ, ತಾವು ಆ ವಿಷಯವನ್ನು ಕುರಿತು ಸೂಕ್ತವಾದ ಸಲಹೆ ಸೂಚನೆಗಳನ್ನು ನೀಡಿದ್ದಷ್ಟೇ ಅಲ್ಲದೇ ಅದೇ ಮಹಾವಿದ್ಯಾಲಯದಲ್ಲಿ "ಭಾರತದ ಸಂವಿಧಾನ" ವಿಷಯದಲ್ಲಿ ಉಪನ್ಯಾಸಕರಾಗಿರುವ ಪ್ರೊ॥ ಕೆ. ಆರ್. ಐತಾಳ ಮತ್ತು ಪ್ರೊ॥ ಸಿ. ರಾಜಶೇಖರ ಇವರುಗಳಿಂದ ಸೂಕ್ತವಾದ ಮಾರ್ಗದರ್ಶನ ದೊರೆಯುವಂತೆ ಮಾಡಿದರು. ಇದೇ ರೀತಿಯಾಗಿ ಆ ಕಾನೂನು ಮಹಾವಿದ್ಯಾಲಯದಲ್ಲಿ ನಮ್ಮ ಸಹಪಾಠಿಯಾಗಿದ್ದ ಮತ್ತು ಈಗ ವಕೀಲಿ ವೃತ್ತಿಯಲ್ಲಿ ತೊಡಗಿರುವ ಧಾರವಾಡದ ಶ್ರೀಮತಿ ಸಾವಿತ್ರಿ ಮಹಿಷಿಯವರೂ ಸಹಿತ ಈ ವಿಷಯವನ್ನು ಕುರಿತು ಮೆಚ್ಚಿಗೆ ವ್ಯಕ್ತಪಡಿಸಿ ತಮ್ಮ ಸಲಹೆ ಸೂಚನೆಗಳನ್ನು ನೀಡಿರುವರು. ಹಂಚಿನಾಳದ ಶ್ರೀಯುತ ಕೃಷ್ಣರಡ್ಡಿ ನಾಗರಡ್ಡಿ ಗಂಗಲರವರು ಈ ಪುಸ್ತಕದ ಟೈಪ-ಪ್ರತಿಯನ್ನು ಸಂಪೂರ್ಣ ಓದಿ ಅದರ ಕೊನೆಯ ಭಾಗದಲ್ಲಿರುವ "ರುದ್ರಭೂಮಿಯಲ್ಲಿ ನೆಲೆಸಿರುವ ಶಿವಾಚಾರ್ಯರು" ಎಂಬ ವಿಷಯದಲ್ಲಿ ಶ್ರೀ ಗುರು ಪಟದಪ್ಪಜ್ಜನವರ ಮತ್ತು ಅವರ ಗುರುಗಳ ಗದ್ದಿಗೆಗಳ ಪ್ರಭಾವವನ್ನು ಕುರಿತು ಸವಿಸ್ತಾರವಾಗಿ ಬರೆಯುವಂತೆ ಸೂಚನೆ ನೀಡಿರುವರು. ಶ್ರೀಯುತ ಗಂಗಲರವರು ತಾವು ಸ್ವತಃ ಈ ಪುಸ್ತಕ ಪ್ರಕಟನೆಗಾಗಿ ಆರ್ಥಿಕ ನೆರವು ನೀಡಿರುವರಲ್ಲದೇ ಹಣ ಸಂಗ್ರಹಿಸುವ ಕಾರ್ಯದಲ್ಲಿಯೂ ಸಹಿತ ಭಾಗವಹಿಸಿ ಭಕ್ತಿಭಾವನೆಯಿಂದ ಶ್ರೀ ಗುರುವಿನ ಸೇವೆ ಮಾಡಿರುವರು. ಈ ಹಣ ಸಂಗ್ರಹಿಸುವ ಕಾರ್ಯದಲ್ಲಿ ಸೂಕ್ತವಾದ ಮಾರ್ಗದರ್ಶನ ಮಾಡಿರುವ ಇನ್ನೊರ್ವ ವ್ಯಕ್ತಿಯೆಂದರೆ ಹಂಚಿನಾಳದ ಶ್ರೀಯುತ ಶಂಕ್ರಪ್ಪ ವೆಂಕಪ್ಪ ಗಂಗಲರವರು. ಈ ಕೃತಿಯ ಟೈಪ-ಪ್ರತಿಯನ್ನು ಸಂಪೂರ್ಣ ಓದಿ ಇದರ ಪ್ರಕಟನೆಗೆ ಪ್ರೋತ್ಸಾಹಿಸಿದ ಅನೇಕರಲ್ಲಿ ಹಂಚಿನಾಳದ ಶ್ರೀಯುತ ತಿರಕರಡ್ಡಿ ಶೇಷರಡ್ಡಿ ಮಂಗಣ್ಣವರ, ಶ್ರೀಯುತ

ಶಂಕರಗೌಡರು ಶಿವನಗೌಡರು ಬಿಸ್ಟನಗೌಡರ, ಶ್ರೀಯುತ ಹನಮರಡ್ಡಿ ಸಿದ್ಧ ರಡ್ಡಿ ತಿಮ್ಮರಡ್ಡಿಯವರ ಮತ್ತು ಶ್ರೀಯುತ ಯಲ್ಲರಡ್ಡಿ ಶಿವರಡ್ಡಿ ಮಂಕಣಿ ಇವರುಗಳು ಪ್ರಮುಖರು. ಹಂಚಿನಾಳದ ಶ್ರೀಯುತ ರು. ಈ. ಕಳಕಣ್ಣವರ ಮತ್ತು ಶ್ರೀಯುತ ಕೃ. ನಾ. ಗಂಗಲ ಇವರುಗಳು ಈ ಸಾಹಿತ್ಯ ಕೃತಿಯನ್ನು ಕುರಿತು ತಮ್ಮ ಸದಭಿಪ್ರಾಯವನ್ನು ಬರೆದು ಕೊಟ್ಟಿರುವರು.

ಈ ಪುಸ್ತಕವು ಪ್ರಕಟನಾ ಹಂತವನ್ನು ತಲುಪಿದಾಗ ಮುದ್ರಣ ಕಾರ್ಯಕ್ಕೆ ಸಂಬಂಧಿಸಿದ ಸೂಕ್ತ ಮಾರ್ಗದರ್ಶನ ಮಾಡಿ ನಮಗೆ ಸಹಾಯ ಮಾಡಿದವರು ರಾಮದುರ್ಗದ ಭಾರತ ಪ್ರಿಂಟಿಂಗ ಪ್ರೆಸ್ಸಿನ ಮಾಲಿಕರಾಗಿರುವ ಶ್ರೀಯುತ ಬಸವರಾಜ ಹೊಳಿಮಠ ಮತ್ತು ವೀರಶೈವ ಪಂಚಮಹಾಪೀಠಗಳ ಅಭಿಮಾನಿಗಳಾಗಿರುವ, ಪಂಚಮಹಾಚಾರ್ಯರ ಸೇವಾಧುರೀಣರೆಂದೆನಿಸಿಕೊಂಡಿರುವ, ಗದುಗಿನ ವಿಜಯಾ ಬುಕ್ ಡಿಪೋದ ಮಾಲಿಕರಾದ ಶ್ರೀ. ವೇ. ಪಂಡಿತ ಸದಾಶಿವ ಶಾಸ್ತ್ರಿ ತೋಟಪ್ಪಯ್ಯ ಶಾಸ್ತ್ರಿ ಹಿರೇಮಠರವರು (ಶ್ರೀಯುತ ಎಸ್. ಟಿ. ಹಿರೇಮಠರವರು). ಈ ಪುಸ್ತಕವು ಹೆಚ್ಚು ಸುಂದರವಾಗಿ ಮೂಡಿಬರಲು ಹೆಚ್ಚಿನ ಆರ್ಥಿಕ ನೆರವು ನೀಡಿದ್ದಲ್ಲದೇ, ಗದಗ—ಬೆಟಗೇರಿಯ ಶ್ರೀಯುತ ಪಿ ಎಲ್. ಮೇರವಾಡೆ ಎಂಜಿನೀಯರರಿಂದ ಮಠ ಹಾಗೂ ಗುಡಿಗಳ ಸುಂದರವಾದ ರೇಖಾ ಚಿತ್ರಗಳನ್ನು ಬರೆಯಿಸಿ ಕೊಟ್ಟವರು ನನ್ನ ಚಿಕ್ಕಪ್ಪನವರು (ಶ್ರೀಯುತ ಸೋಮಯ್ಯ ಚರಂತಯ್ಯ ಹಿರೇಮಠರವರು) ಮುದ್ರಣ ಕಾರ್ಯ ನಡೆಯುತ್ತಿದ್ದ ಸಮಯದಲ್ಲಿ ಪ್ರೂಫ್ ರೀಡಿಂಗ್ ಕಾರ್ಯದಲ್ಲಿ ಭಾಗಿಗಳಾಗಿ ಈ ಗುರು ಸೇವಾ ಕಾರ್ಯದಲ್ಲಿ ಸಹಕರಿಸಿದವರು ನನ್ನ ಮಾವನವರು (ಲಿಂಗದಾಳ ಗ್ರಾಮದ ಶ್ರೀಯುತ ಪಂಚಾಕ್ಷರಯ್ಯ ಕೊಟ್ರಯ್ಯ ಹೊಸಮಠ) ಇನ್ನು ನಾನು ಮಾಡುತ್ತಿರುವ ಈ ಎಲ್ಲ ಕಾರ್ಯಗಳನ್ನೂ ಅತ್ಯಂತ ಆಸಕ್ತಿಯಿಂದ ಆಲಿಸಿ ಸೂಕ್ತವಾದ ರೀತಿಯಲ್ಲಿ ಮಾರ್ಗದರ್ಶನ ಮಾಡಿ ಪ್ರೋತ್ಸಾಹಿಸುತ್ತ ಬಂದಿರುವ ನನ್ನ ತಾಯಿ ಶಾಂತಮ್ಮಳನ್ನು ನಾನೀ ಸಂದರ್ಭದಲ್ಲಿ ಸ್ಮರಿಸಿಕೊಳ್ಳದೇ ಇರಲಾರೆ. ಗದುಗಿನ ಅಶೋಕ ಪ್ರಿಂಟಿಂಗ ಪ್ರೆಸ್ಸಿನ ಮಾಲಿ

ಕರಾದ ಶ್ರೀ ಖಟವಟೆ ಬಂಧುಗಳು ಮತ್ತು ಕಾರ್ಮಿಕ ವರ್ಗದವರು ಭಕ್ತಿ ಭಾವನೆಯಿಂದ ಈ ಪುಸ್ತಕವನ್ನು ಮುದ್ರಿಸಿ ಕೊಟ್ಟಿರುವರು. ಅದೇ ರೀತಿ ಯಾಗಿ ಹುಬ್ಬಳ್ಳಿಯ ಶ್ರೀಯುತ ಲಕ್ಷ್ಮಣ ಮಹಾದೇವ ಕೇರೀಕರ ಇವರು ಈ ಪುಸ್ತಕಕ್ಕೆ ಸುಂದರವಾದ ಮುಖ ಪುಟವನ್ನು ಚಿತ್ರಿಸಿ ಕೊಟ್ಟಿರುವರು.

ಈ ಗುರುಸೇವಾ ಕಾರ್ಯದಲ್ಲಿ ನೆರವಾಗಿರುವ ಸರ್ವರಿಗೂ ಲಿಂಗೈಕ್ಯ ಶ್ರೀ ಗುರು ಪಟದಪ್ಪಜ್ಜನವರು, ಶ್ರೀ ಜಗದ್ಗುರು ಪಂಚಾಚಾರ್ಯರು ಮತ್ತು ಶ್ರೀ ಸಿದ್ಧಲಿಂಗೇಶ್ವರನು ಆಯುರಾರೋಗ್ಯ, ಸಕಲ ಸಂಪದಭಿ ವೃದ್ಧಿಯನ್ನು ಕರುಣಿಸಲಿ ಎಂಬುದಾಗಿ ಪ್ರಾರ್ಥಿಸುತ್ತೇನೆ.

॥ ಸತ್ಯಂ ಶಿವಂ ಸುಂದರಂ ॥

**ಹಂಚಿನಾಳ** **ಕೊಟ್ರಯ್ಯ ಮ. ಹಿರೇಮಠ**

**೧೦–೫–೧೯೮೧**



# ಗ್ರಂಥ ಪ್ರಕಟನೆಗೆ ಉದಾರ ನೆರವು ನೀಡಿದ ಗುರು ಸೇವಾಸಕ್ತರು

ಈ ಸಾಹಿತ್ಯ ಕೃತಿಯು ಪ್ರಕಟನೆಗೆ ತಮ್ಮ ಭಕ್ತಿ ಸೇವೆಯನ್ನು ಸಲ್ಲಿಸಿರುವ ಮಹನೀಯರ ಹೆಸರುಗಳು :

೧) ಶ್ರೀಯುತ ಮಹಾಲಿಂಗಯ್ಯ ಚರಂತಯ್ಯ ಹಿರೇಮಠ.

೨) " ಮುರಳಯ್ಯ ಚರಂತಯ್ಯ ಹಿರೇಮಠ.

೩) " ಸಿದ್ಧಲಿಂಗಯ್ಯ (ಉರ್ಫ ಈಶಣ್ಣ) ಚರಂತಯ್ಯ ಹಿರೇಮಠ
ಮಾಜಿ ಚೇರಮನ್, ಗ್ರಾಮ ಸೇವಾ ಸಹಕಾರಿ ಸಂಘ, ಹಂಚಿನಾಳ.

೪) ಶ್ರೀಯುತ ಸೋಮಯ್ಯ ಚರಂತಯ್ಯ ಹಿರೇಮಠ.
ಜ್ಯೋತಿ ಸ್ಟೀಲ ಇಂಡಸ್ಟ್ರೀಜ, ಉದ್ಯಮನಗರ, ಹುಬ್ಬಳ್ಳಿ

೫) ಶ್ರೀಯುತ ಚಂದ್ರಯ್ಯ ಚರಂತಯ್ಯ ಹಿರೇಮಠ.

೬) ಶ್ರೀಯುತ ಪಟದಯ್ಯ ಚರಂತಯ್ಯ ಹಿರೇಮಠ.
ಭಾರತ ಮೆಟಲ್ ಇಂಡಸ್ಟ್ರೀಜ, ಉದ್ಯಮನಗರ, ಹುಬ್ಬಳ್ಳಿ.

೭) ಶ್ರೀಯುತ ಮರಿತಮ್ಮಪ್ಪ ಮೈಲಾರಪ್ಪ ಗೊರನಕೊಳ್ಳ.

೮) ಶ್ರೀಯುತ ಭರಮಪ್ಪ (ಉರ್ಫ ಪುದಕಪ್ಪ) ಸಣ್ಣಪರಪ್ಪ ಅಂಕಲಕಿ.

೯) ಶ್ರೀಯುತ ರುದ್ರಪ್ಪ ಈರಪ್ಪ ಕಳಕಣ್ಣವರ.
ನಿವೃತ್ತ ಪ್ರಧಾನ ಗುರುಗಳು, ಕ. ಗಂ. ಶಾಲೆ, ಹಂಚಿನಾಳ.

೧೦) ಶ್ರೀಯುತ ಕೃಷ್ಣರಡ್ಡಿ ನಾಗರಡ್ಡಿ ಗಂಗಲ.
ಪ್ರಧಾನ ಗುರುಗಳು, ಕ. ಹೆ. ಮ. ಶಾಲೆ, ಹಂಚಿನಾಳ.

೧೧) ಶ್ರೀಯುತ ಕ್ರಿಷ್ಟರಡ್ಡಿ ನಿಂಗರಡ್ಡಿ ಒಂಟಿಗೋಡಿ.

೧೨) ಶ್ರೀಯುತ ಶಂಕ್ರಪ್ಪ ವೆಂಕಪ್ಪ ಗಂಗಲ.

೧೩) ಲಿಂಗೈಕ್ಯ ಶ್ರೀಯುತ ಶಿವನಗೌಡರು ನಿಂಗನಗೌಡರು ಬಿಷ್ಟನಗೌಡರ
ಇವರ ಸ್ಮರಣಾರ್ಥ ಇವರ ಮಕ್ಕಳು.

೧೪) ಲಿಂಗೈಕ್ಯ ಶ್ರೀಯುತ ಹನಮಪ್ಪ ಶಿವಪ್ಪ ಅಂಕಲಕಿ ಇವರ ಸ್ಮರಣಾರ್ಥ
ಇವರ ಸಹೋದರ ಶ್ರೀಯುತ ಮಲ್ಲಪ್ಪನವರು.

೧೫) ಶ್ರೀಯುತ ಬಸವಣ್ಣೆಪ್ಪ ನಿಂಗಪ್ಪ ಚಿಲಕವಾಡ.

೧೬) ಲಿಂಗೈಕ್ಯ ಶ್ರೀಯುತ ರುದ್ರಪ್ಪ ದೇವಪ್ಪ ಮಂಗಣ್ಣವರ ಇವರ ಸ್ಮರಣಾರ್ಥ ಇವರ ಧರ್ಮಪತ್ನಿ ಶ್ರೀಮತಿ ಹನಮವ್ವ ಕೋಂ. ರುದ್ರಪ್ಪ ಮಂಗಣ್ಣವರ.

೧೭) ಶ್ರೀಯುತ ರುದ್ರಪ್ಪ ಈರಪ್ಪ ವಾಳೀದ.

೧೮) " ಕಲ್ಲಪ್ಪ ಸಂಗಪ್ಪ ಬಳಿಗೇರ.

೧೯) " ಸೋಮರಡ್ಡಿ ಶೇಷರಡ್ಡಿ ಮಂಗಣ್ಣವರ.

೨೦) " ಪರ್ವತಗೌಡರು ಗೌಡಪ್ಪಗೌಡರು ದೇಸಾಯಿಗೌಡ್ರ, ಸಾ|| ಕೊಂಗವಾಡ, ತಾ|| ನವಲಗುಂದ.

೨೧) ಶ್ರೀಯುತ ಹನಮರಡ್ಡಿ ಸಿದ್ಧರಡ್ಡಿ ತಿಮ್ಮರಡ್ಡಿಯವರ.

೨೨) " ರಾಮನಗೌಡರು ಸಿದ್ಧನಗೌಡರು ಪಾಟೀಲ.

೨೩) " ಸಂಗನಗೌಡ್ರು ಬ. ಪಾಟೀಲ.

ಶ್ರೀ ಜಗದ್ಗುರು ರೇಣುಕ ಮಹಾಮಂದಿರ ಸಂಸ್ಥಾಪಕರು.
ಸಾ|| ಹಳ್ಳಿಯಾಳ, ತಾ|| ಹುಬ್ಬಳ್ಳಿ.

"ಹಂಚಿನಾಳ ಹಿರೇಮಠದ ಶ್ರೀಗುರು ಪರಂಪರೆ" ಎಂಬ ಈ ಗ್ರಂಥದ ಪ್ರಕಟನೆಗೆ ತಮ್ಮ ಭಕ್ತಿ ಕಾಣಿಕೆಯನ್ನು ಅರ್ಪಿಸಿದ ಸರ್ವರಿಗೂ ಲಿಂಗೈಕ್ಯ ಶ್ರೀ ಗುರು ಪಟದಪ್ಪಜ್ಜನವರು, ಶ್ರೀ ಜಗದ್ಗುರು ಪಂಚಾಚಾರ್ಯರು, ಮತ್ತು ಶ್ರೀ ಸಿದ್ಧಲಿಂಗೇಶ್ವರನು ಆಯುರಾರೋಗ್ಯ ಸಕಲ ಸಂಪದಭಿವೃದ್ಧಿಯನ್ನು ಅನುಗ್ರಹಿಸಲಿ ಎಂಬುದಾಗಿ ಪ್ರಾರ್ಥಿಸುತ್ತೇನೆ.

—ಲೇಖಕರು.

* ಓಂ ಸಿದ್ಧಲಿಂಗೇಶ್ವರಾಯ ನಮಃ *

# ಅರ್ಪಣೆ

ಈ ಸಾಹಿತ್ಯ ಕೃತಿಯನ್ನು
ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷ,
ವೈರಾಗ್ಯ ಮೂರ್ತಿ,
ಲಿಂಗೈಕ್ಯ

ಶ್ರೀ ಷ॥ ಬ್ರ॥ ಪಟದಯ್ಯ (ಉರ್ಫ ಮಹಾದೇವ)
ಶಿವಾಚಾರ್ಯ ಸ್ವಾಮಿಗಳ

( ಅರ್ಥಾತ್
ಲಿಂ. ಶ್ರೀ ಗುರು ಪಟದಪ್ಪಜ್ಜನವರ )

ಅಡಿದಾವರೆಗಳಲ್ಲಿ
ಭಕ್ತಿ ಪುರಸ್ಸರವಾಗಿ ಸಮರ್ಪಿಸಲಾಗಿದೆ.

# ವಿಷಯ ಸೂಚಿ

ಗುರು ಮಂದಿರ



ಹಂಚಿನಾಳ ಶ್ರೀ ಹಿರೇಮಠದ
ಪಟ್ಟಾಧ್ಯಕ್ಷರುಗಳ ಗದ್ದಿಗೆ




ಶ್ರೀ ಸಿದ್ಧಲಿಂಗೇಶ್ವರ ದೇವಸ್ಥಾನ
ಹಂಚಿನಾಳ
(ಹೊರನೋಟ)



ಶ್ರೀ ಹಿರೇಮಠ

ಹಂಚಿನಾಳ

(ಹೊರನೋಟ)



ಶ್ರೀ ಹಿರೇಮಠ, ಹಂಚಿನಾಳ
(ಒಳನೋಟ)

ಒಬ್ಬನಲ್ಲದೇ ಇಬ್ಬರಿಲ್ಲವೆಂದರಿತಾಗ,
ನಾನೇ ನೀನಾಗುವ ಬಗೆಯನರಿತಾಗ,
ನಿನ್ನಲ್ಲಿಯೇ ನಾ ಬೆರೆತಿರುವಾಗ,
ಹಂಚಿನಾಳ ಸಿದ್ಧಲಿಂಗೇಶ್ವರಾ
ಇಲ್ಲಿ ನಿನ್ನ ಹೊರತಿನ್ನಾರಿಹರಯ್ಯಾ.

—ಶ್ರೀ ಕೊ. ವು. ಹಿ.

॥ ಓಂ. ಸಿದ್ಧಲಿಂಗೇಶ್ವರಾಯ ನಮಃ ॥



# ಪೀಠಿಕೆ

"ಭಾರತವು ಪ್ರಪಂಚಕ್ಕೆ ನೀಡಿದ ಕೊಡುಗೆಯೆಂದರೆ ಇಲ್ಲಿಯ ಮಹಾನುಭಾವರು, ಸತ್ಪುರುಷರು ಹಾಗೂ ಶುದ್ಧ ಜೀವನದ ಸನ್ಯಾಸಿಗಳು" ಎಂಬುದಾಗಿ ಬಲ್ಲವರು ಹೇಳುತ್ತಾರೆ ಈಮಾತು ಅತಿಶಯೋಕ್ತಿ ಎನಿಸಲಾರದು. ಪ್ರಪಂಚದ ಇತರ ಭಾಗಗಳಲ್ಲಿಯೂ ಸಹ ಅನೇಕ ಮಹಾಪುರುಷರು ಆಗಿ ಹೋಗಿರುವರು. ಆದರೆ ಈ ದಿಸೆಯಲ್ಲಿ ಭಾರತವು ಪ್ರಪಂಚಕ್ಕೆ ನೀಡಿದ ಕೊಡುಗೆಯು ಬಲು ವಿಶಿಷ್ಟವಾದದ್ದು. ಇಲ್ಲಿಯ ಶುದ್ಧ ಜೀವನದ ಸಿದ್ಧಿ ಪುರುಷರು ಒಬ್ಬರೇ ಇಬ್ಬರೇ? ಅಸಂಖ್ಯಾತರಾದ ಇವರು ವಿಶ್ವಕಲ್ಯಾಣ ವನ್ನೇ ತಮ್ಮ ಜೀವನದ ಧ್ಯೇಯವನ್ನಾಗಿರಿಸಿಕೊಂಡು ಮೂಡಿ ಬಂದಿರುವರು. ಈ ಮಹಾನುಭಾವರ ಇಡೀ ಜೀವನವೇ ಒಂದು ಪವಾಡ ಪುಂಜವಾಗಿ ಕಂಗೊಳಿಸಿದೆ. ಇವರು ಸಂಸಾರದ ವ್ಯಾಮೋಹವನ್ನು ತೊರೆದು ವೈರಾಗ್ಯ ಪಥದಲ್ಲಿ ಸಾಗುತ್ತ, ಮನುಕುಲದ ಉದ್ಧಾರಕ್ಕಾಗಿ ಪಣ ತೊಟ್ಟು ನಿಂತ ಮನುಕುಲೋದ್ಧಾರಕರು. ಇವರು ಅಪಾರವಾದ ಲೋಕ ಸೇವಾ ಕಾರ್ಯ ದಲ್ಲಿ ನಿರತರಾಗಿ ನಿತ್ಯ ಸತ್ಯ ತತ್ತ್ವಗಳನ್ನು ಮತ್ತು ಮಾನವೀಯ ಮೌಲ್ಯ ಗಳನ್ನು ತಾವುಗಳು ನಡೆದಾಡಿದ ನೆಲದಲ್ಲಿ ನೆಟ್ಟು, ಬೆಳೆಯಿಸಿ, ಅಮರರಾಗಿ ದ್ದಾರೆ. "ಶಾಂತಿಯ ಅಗ್ರದೂತರು" ಎನಿಸಿಕೊಂಡಿರುವ ಇವರು ಸತ್ಯ, ಅಹಿಂಸೆಗಳ ಮೂಲಕವಾಗಿ ಸಮಾಜದಲ್ಲಿ ಶಾಂತಿಯು ನೆಲೆಗೊಳ್ಳುವಂತೆ ಮಾಡಿರುವರು. ಈ ಮಹಾಪುರುಷರು ಸೂರ್ಯ-ಚಂದ್ರರೋಪಾದಿಯಲ್ಲಿ ಮನಕುಲದ ದಾರಿ ದೀಪಗಳಾಗಿ ಪ್ರಕಾಶಿಸುತ್ತಿರುವರು.

## ಧರ್ಮ-ಭೂಮಿ

ಭಾರತವು ಬೇರೆ ಬೇರೆ ಧರ್ಮಗಳನ್ನು ಅವಲಂಬಿಸಿರುವ ಹಲವು ಜನಾಂಗಗಳಿಗೆ ಆಶ್ರಯ ಮತ್ತು ಸಮಾನವಾದ ಸ್ಥಾನವನ್ನು ಕೊಟ್ಟಿರುವದು ಈ ದೇಶದ ಇನ್ನೊಂದು ವೈಶಿಷ್ಟ್ಯವಾಗಿದೆ. ಪ್ರಾಚೀನ ಕಾಲದಿಂದಲೂ ಭಾರತವು ಹಲವು ಧರ್ಮಗಳ ನೆಲೆವೀಡಾಗಿದ್ದುದನ್ನು ನಾವು ಕಾಣುತ್ತೇವೆ. ನಮ್ಮ ದೇಶದಲ್ಲಿ ಅನೇಕ ಧರ್ಮಗಳು, ಧಾರ್ಮಿಕ ನಂಬಿಕೆಗಳು, ವಿಶ್ವಾಸ ಗಳು ಮತ್ತು ಮತಾಚಾರಗಳಿವೆ. ಆರ್ಯರು ಈ ದೇಶಕ್ಕೆ ವಲಸೆ ಬರುವುದ ಕ್ಕಿಂತಲೂ ಮೊದಲು, ಅಂದರೆ ವೇದಗಳು ರಚನೆ ಆಗುವುದಕ್ಕಿಂತ ಮೊದಲೇ ಈ ನಾಡಿನ ಸಂಸ್ಕೃತಿಯು ಶ್ರೇಷ್ಠ ಮಟ್ಟದ ಸಂಸ್ಕೃತಿಯಾಗಿ ಮೆರೆದಿರುವುದು, ನಮಗೀಗ ಸಿಂಧೂ ಕೊಳ್ಳದ ಸಂಸ್ಕೃತಿಯಿಂದ ತಿಳಿದು ಬರುತ್ತದೆ. ದೇವರುಗಳ ದೇವ, ಮಹಾದೇವ ಎನಿಸಿಕೊಂಡಿರುವ ಶಿವನ ಉಪಾಸನೆಯು ಸಿಂಧೂ ಕೊಳ್ಳದ ಸಂಸ್ಕೃತಿಯ ಕಾಲದಿಂದಲೂ ನಡೆದ ಬಂದಿರುವುದನ್ನು ನಾವು ಕಾಣುತ್ತೇವೆ. "ಧರ್ಮ ಭೂಮಿ" ಎನಿಸಿಕೊಂಡಿರುವ ಈ ಭಾರತದ ನೆಲದಲ್ಲಿ ಜನ್ಮ ತಾಳಿರುವ ಮತಾಚಾರ್ಯರ ಸಿದ್ಧಾಂತಗಳು ಜಗದ್ವಂದ್ಯ ವಾಗಿವೆ. ವೈರಾಗ್ಯ, ತ್ಯಾಗ, ತಾಳ್ಮೆ, ಅನುಕಂಪ ಮತ್ತು ದಯೆ ಇವು ಭಾರತೀಯರ ಮೇಲ್ಮೆಯನ್ನು ಸೂಚಿಸುವ ಭಾರತೀಯರ ಸದ್ಗುಣಗಳಾಗಿವೆ. ಅನ್ಯ ಮತೀಯರಿಗೆ ಭಾರತವು ಆಶ್ರಯವನ್ನಿತ್ತು ಪೋಷಿಸಿರುವ ನಿದರ್ಶನ ಗಳು ಬಹಳಷ್ಟಿವೆ. ಈ ಕಾರಣದಿಂದಲೇ ಭಾರತದಲ್ಲಿ ಇಂದು ಆಚರಣೆ ಯಲ್ಲಿರುವಷ್ಟು ಧರ್ಮಗಳು ಧಾರ್ಮಿಕ ನಂಬಿಕೆಗಳು ಮತ್ತು ಮತಾಚಾರಗಳು ಜಗತ್ತಿನ ಬೇರಾವ ದೇಶದಲ್ಲಿಯೂ ಕಂಡು ಬರುವುದಿಲ್ಲ.

## ಧರ್ಮಗಳು ಮತ್ತು ನಮ್ಮ ಸಂವಿಧಾನ

ಈ ಪುಸ್ತಕವು ಧರ್ಮವೊಂದರ ಮೂಲಭೂತ ತತ್ತ್ವಗಳ ಸಂಕ್ಷಿಪ್ತ ಪರಿಚಯ ಮತ್ತು ಹಂಚಿನಾಳ ಗ್ರಾಮದ ಶ್ರೀ ಹಿರೇಮಠದಲ್ಲಿ ಆಗಿ ಹೋಗಿ ರುವ ಧಾರ್ಮಿಕ ಪುರುಷರ ಚರಿತ್ರೆ ಇವುಗಳನ್ನು ಒಳಗೊಂಡಿರುತ್ತದೆ. ಧರ್ಮ ವನ್ನು ಮತ್ತು ಧಾರ್ಮಿಕ ಪುರುಷರನ್ನು ಕುರಿತು ತಿಳಿದು ಕೊಳ್ಳುವುದಕ್ಕಿಂತ ಮೊದಲು ಭಾರತೀಯರಾದ ನಾವು ನಮ್ಮ ದೇಶದಲ್ಲಿರುವ ಎಲ್ಲ ಧರ್ಮಗಳನ್ನು

ಕುರಿತು "ಭಾರತದ ಸಂವಿಧಾನ"ವು ಏನು ಹೇಳುತ್ತದೆ ಎಂಬುದನ್ನು ತಿಳಿದು ಕೊಂಡಿರಬೇಕು. ಆ ಕಾರಣಕ್ಕಾಗಿ ಭಾರತದ ಸಂವಿಧಾನವು ಧರ್ಮಗಳನ್ನು ಕುರಿತು ಅನುಸರಿಸುತ್ತಿರುವ ನೀತಿಯನ್ನು ಇಲ್ಲಿ ಸಕ್ಷಿಂಪ್ತವಾಗಿ ವಿವರಿಸ ಲಾಗುವುದು.

ನಮ್ಮ ದೇಶವು ಸ್ವತಂತ್ರವಾದ ನಂತರ ನಮ್ಮ ಹಿರಿಯರು "ಭಾರತದ ಸಂವಿಧಾನ" (Constitution of India) ವನ್ನು ರಚಿಸಿದರು. ಇಂದು ನಮ್ಮ ದೇಶದಲ್ಲಿ ಜಾರಿಯಲ್ಲಿರುವ ಎಲ್ಲ ಕಾನೂನುಗಳಲ್ಲಿ ಭಾರತದ ಸಂವಿಧಾನವು ಬಲು ಪ್ರಮುಖವಾದ ಕಾನೂನಾಗಿರುತ್ತದೆ. ನಮ್ಮ ಹಿರಿಯರು ನಮ್ಮ ರಾಷ್ಟ್ರಕ್ಕೆ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂಬೆಲ್ಲ ವಿಷಯಗಳನ್ನು ಆಲೋಚಿಸಿ ಸ್ವತಂತ್ರವಾಗಿರುವ ಈ ರಾಷ್ಟ್ರವನ್ನು ತಾವು ಯಾವ ರೀತಿಯಲ್ಲಿ ಕಟ್ಟಬೇಕೆಂದು ಕನಸು ಕಂಡಿದ್ದರೋ ಆ ಕನಸುಗಳೆಲ್ಲವೂ ನನಸಾಗುವುದಕ್ಕೆ ಅವಶ್ಯವಿರುವ ಎಲ್ಲ ನೀತಿ ನಿಯಮಗಳನ್ನು ಸಂಗ್ರಹಿಸಿ ಈ ಭಾರತದ ಸಂವಿಧಾನದಲ್ಲಿ ಅಳವಡಿಸಿರುವರು. ಇಂದು ನಮ್ಮ ಈ ಭಾರತ ದೇಶವು ಭಾರತದ ಸಂವಿಧಾನಕ್ಕನುಗುಣವಾಗಿ ನಡೆಯುತ್ತಿದೆ.

ಭಾರತದ ಸಂವಿಧಾನದಲ್ಲಿ ಧರ್ಮವೆಂದರೆ ಏನು ? ಎಂಬ ವಿಷಯವನ್ನು ಕುರಿತು ಚರ್ಚೆಯಾಗಲಿ ಅಥವಾ "ಧರ್ಮ" ಎಂಬೀ ಪದದ ವ್ಯಾಖ್ಯೆ ಯಾಗಲೀ ಇರುವುದಿಲ್ಲ. ಧರ್ಮದ ವಿಷಯದಲ್ಲಿ ನಮ್ಮ ಸಂವಿಧಾನವು ಅನುಸರಿಸುತ್ತಿರುವ ನೀತಿಯು ಧಾರ್ಮಿಕವೂ ಅಲ್ಲ ಮತ್ತು ಧರ್ಮ ವಿರೋಧಿಯೂ ಅಲ್ಲ. ನಮ್ಮ ರಾಷ್ಟ್ರದಲ್ಲಿ ಹಲವು ಧರ್ಮಗಳಿದ್ದರೂ ಸಹಿತ ನಮ್ಮ ರಾಷ್ಟ್ರವು ಯಾವುದೇ ಒಂದು ಧರ್ಮವನ್ನು ಅನುಸರಿಸಲು ಅಪೇಕ್ಷಿ ಸುವದಿಲ್ಲ, ಮತ್ತು ಯಾವುದೇ ಒಂದು ಧರ್ಮವನ್ನು ಆಯ್ದುಕೊಂಡು ಅದು ರಾಷ್ಟ್ರದ ಧರ್ಮ ಎಂಬುದಾಗಿ ಹೇಳಿಕೊಳ್ಳುವದಿಲ್ಲ. ನಮ್ಮ ರಾಷ್ಟ್ರವು ಇಂತಹದೇ ಒಂದು ಧರ್ಮವನ್ನು ಪಾಲಿಸಬೇಕೆಂಬುದಾಗಿ ತನ್ನ ಪ್ರಜೆಗಳನ್ನು ಒತ್ತಾಯಪಡಿಸುವುದಿಲ್ಲ. ನಮ್ಮ ಸಂವಿಧಾನವು ನಮ್ಮ ದೇಶದಲ್ಲಿರುವ ಎಲ್ಲ ಧರ್ಮಗಳಿಗೂ ಸಮಾನವಾದ ಸ್ಥಾನಮಾನಗಳನ್ನು ನೀಡುತ್ತದೆ. ಒಟ್ಟಿನಲ್ಲಿ ಧರ್ಮದ ವಿಷಯದಲ್ಲಿ ಮತ್ತು ನಮ್ಮ ದೇಶದಲ್ಲಿರುವ ಎಲ್ಲ ಧರ್ಮಗಳನ್ನು ಕುರಿತು ಭಾರತದ ಸಂವಿಧಾನವು ತಟಸ್ಥ–ನೀತಿಯನ್ನು ಅನುಸರಿಸುತ್ತದೆ.

ಇದುವೇ ನಮ್ಮ ಸಂವಿಧಾನದ ಪೀಠಿಕೆಯಲ್ಲಿ ಹೇಳಲ್ಪಟ್ಟಿರುವ "ಧರ್ಮ ನಿರಪೇಕ್ಷತಾ ನೀತಿ" (Secularism) ಯಾಗಿರುತ್ತದೆ.

ಭಾರತೀಯರಾಗಿರುವ ನಾವು ಇಲ್ಲಿರುವ ಒಂದಿಲ್ಲೊಂದು ಧರ್ಮದ ಅನುಯಾಯಿಗಳಾಗಿರುತ್ತೇವೆ. ಇಂದು ನಾವು ಧರ್ಮವನ್ನು ಕುರಿತು ಮಾತನಾಡತೊಡಗಿದ ಕೂಡಲೇ ಜಾತಿ ಮತ್ತು ಜಾತಿವಾದಿಗಳು ಅದರೊಡನೆ ಬಹು ಬೇಗನೇ ಸೇರಿಕೊಂಡು ಬಿಡುತ್ತವೆ, ಮತ್ತು ಧಾರ್ಮಿಕ ಚಿಂತನವನ್ನು ಹದಗೆಡಿಸಿ ಬಿಡುತ್ತವೆ. ಧರ್ಮವನ್ನು ಕುರಿತು ನಡೆಯಬೇಕಾಗಿರುವ ವ್ಯಾಪಕ ವಾದ ಚರ್ಚೆಯು ಮಧ್ಯದಲ್ಲಿ ಜಾತಿವಾದವು ಸೇರಿಕೊಂಡರೆ ಅದು ಸಂಕುಚಿತ ಮನೋಭಾವನೆಯನ್ನು ಹುಟ್ಟಿಸಿ, ಚರ್ಚೆಯು ಮುಂದುವರಿಯದಂತೆ ಮಾಡಿ, ಮಾನವ ಮಾನವರ ಮಧ್ಯದಲ್ಲಿ ಅಡ್ಡ ಗೋಡೆಗಳನ್ನು ನಿರ್ಮಿಸುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮ ದೇಶದಲ್ಲಿ ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದಿರುವ ಜಾತಿ ಪದ್ಧತಿ. ಈ ಜಾತಿ ಪದ್ಧತಿಯು ಹಲವಾರು ಸಮಸ್ಯೆಗಳಿಗೆ ಕಾರಣವಾಗಿದೆ. ಪ್ರಾಚೀನ ಕಾಲದಿಂದ ನಮ್ಮ ದೇಶದಲ್ಲಿ ಆಚರಣೆಯಲ್ಲಿ ಇದ್ದುಕೊಂಡು ಬಂದಿರುವ "ಅಸ್ಪೃಶ್ಯತೆ"ಯು ಇದಕ್ಕೊಂದು ಉದಾಹರಣೆ. ಜಾತಿ ಮತ್ತು ಜಾತಿವಾದಗಳಿಂದ ಹುಟ್ಟಿಕೊಳ್ಳುವ ಅನೇಕ ಸಮಸ್ಯೆಗಳಿಂದ ಮುಕ್ತರಾಗಬೇಕಾದರೆ ನಾವು ಮೊದಲು "ಜಾತಿ" ಮತ್ತು "ಧರ್ಮ" ಇವುಗಳನ್ನು ಬೇರ್ಪಡಿಸಲು ಕಲಿತುಕೊಳ್ಳಬೇಕು. ಈ ರೀತಿ ಮಾಡುವುದರಿಂದ ಧರ್ಮವನ್ನು ಕುರಿತು ಸರಿಯಾದ ತಿಳುವಳಿಕೆಯನ್ನು ಸಂಪಾದಿಸಿಕೊಳ್ಳುವುದು ನಮ್ಮಿಂದ ಸಾಧ್ಯವಾಗುತ್ತದೆ.

ಕೇವಲ ಜಾತಿಯೊಂದನ್ನೇ ಆಧಾರವಾಗಿರಿಸಿಕೊಂಡು ಮಾನವ ಮಾನವರುಗಳ ಮಧ್ಯದಲ್ಲಿ ಯಾವುದೇ ತಾರತಮ್ಯವನ್ನು ಮಾಡಬಾರದು ಎಂಬುದಾಗಿ ಭಾರತದ ಸಂವಿಧಾನದ ೧೫(೧) ನೇ ಅನುಚ್ಛೇದವು ಹೇಳುತ್ತದೆ. ಇಂತಹುದೇ ಇನ್ನೊಂದು ನಿಯಮವನ್ನು ನಾವು ಸಂವಿಧಾನದ ೧೬ (೨) ನೇ ಅನುಚ್ಛೇದದಲ್ಲಿಯೂ ಕಾಣುತ್ತೇವೆ. ಈ ಅನುಚ್ಛೇದಗಳಲ್ಲಿ ಅಳವಡಿಸಲಾಗಿರುವ ಈ ಸಾಮಾನ್ಯ ನಿಯಮ (General Rule) ದಿಂದಾಗಿ ನಮ್ಮ ರಾಷ್ಟ್ರದ ಸಂವಿಧಾನವು ಜಾತಿಗಳಿಗೆ ಯಾವುದೇ ಮಹತ್ವವನ್ನು

ಕೊಡುವದಿಲ್ಲ ಎಂಬ ಸಂಗತಿಯು ಸ್ಪಷ್ಟವಾಗುತ್ತದೆ. ಜಾತಿಗಳಿಗೆ ಅತೀತವಾದ ಈ ನೀತಿಯು "ಜಾತ್ಯಾತೀತ ನೀತಿ" ಎನಿಸಿಕೊಳ್ಳುತ್ತದೆ. ಈ ಸಾಮಾನ್ಯ ನಿಯಮಕ್ಕೆ ವ್ಯತಿರಿಕ್ತವಾಗಿ ಕಂಡು ಬರುವ ಒಂದು ಅಪವಾದಾತ್ಮಕವಾದ (Exception) ನಿಯಮವು ಸಹ ನಮ್ಮ ಸಂವಿಧಾನದ ೧೫ (೪)ನೇ ಅನುಚ್ಛೇದದಲ್ಲಿ ಇರುತ್ತದೆ. ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿ ಇದ್ದು ಕೊಂಡು ಬಂದಿರುವ ಜಾತಿ ಪದ್ಧತಿಯ ಕಾರಣದಿಂದಾಗಿ ನಮ್ಮ ದೇಶದಲ್ಲಿ ಕೆಲವು ಜಾತಿ ಜನಾಂಗದವರು ಇಂದು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವರು. ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವ ಅಂತಹ ಕೆಲವು ಜಾತಿ ಜನಾಂಗಗಳನ್ನು ಗುರುತಿಸಿ ಅವುಗಳನ್ನು "ಅನುಸೂಚಿತ ಜಾತಿ ಮತ್ತು ಜನಾಂಗಗಳು" Scheduled Castes and Tribes) ಎಂಬುದಾಗಿ ಕರೆಯಲಾಗಿದೆ. ಜಾತಿಗಳಿಗೆ ಮಹತ್ವವನ್ನು ಕೊಡಬಾರದೆಂದು ಸಂವಿಧಾನದ ೧೫(೧) ಮತ್ತು ೧೬ (೨, ನೇ ಅನುಚ್ಛೇದಗಳು ಹೇಳಿದರೂ ಸಹಿತ ಅನುಸೂಚಿತ ಜಾತಿ ಮತ್ತು ಜನಾಂಗದವರು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವರು ಎಂಬ ಕಾರಣಕ್ಕಾಗಿ ಅವರ ಜಾತಿಗಳ ಆಧಾರದ ಮೇಲಿಂದಲೇ ಅವರಿಗೆ ವಿಶೇಷವಾದ ಸೌಲಭ್ಯಗಳನ್ನು ಒದಗಿಸಲು ಭಾರತದ ಸಂವಿಧಾನದ ೧೫(೪)ನೇ ಅನುಚ್ಛೇದವು ಅವಕಾಶ ಮಾಡಿ ಕೊಡುತ್ತದೆ. ಅನುಸೂಚಿತ ಜಾತಿ ಮತ್ತು ಜನಾಂಗದವರ ಪುರೋಭಿವೃದ್ಧಿಗಾಗಿ (Advancement) ಈ ಅವಕಾಶವನ್ನು ಕಲ್ಪಿಸಲಾಗಿದೆ. ಸಂವಿಧಾನದ ೧೫(೧) ಮತ್ತು ೧೬(೨)ನೇ ಅನುಚ್ಛೇದಗಳಲ್ಲಿ ಹೇಳಲ್ಪಟ್ಟಿರುವ ಜಾತ್ಯಾತೀತೆಯ ಸಾಮಾನ್ಯ ನಿಯಮಕ್ಕೆ ಇದೊಂದು ಅಪವಾದವಾಗಿರುವುದು. ಆದರೆ ಈ ಒಂದು ಅಪವಾದಾತ್ಮಕವಾದ ನಿಯಮವನ್ನು ಹೊರತುಪಡಿಸಿದರೆ, ನಮ್ಮ ಸಂವಿಧಾನವು ಜಾತಿಗಳಿಗೆ ಯಾವುದೇ ಮಹತ್ವವನ್ನು ಕೊಡುವುದಿಲ್ಲ ಎಂಬುದನ್ನು ನಾವು ತಿಳಿದುಕೊಳ್ಳಬೇಕು.

ಇದೂ ಅಲ್ಲದೇ ಜಾತಿ ಪದ್ಧತಿಯ ಕಾರಣದಿಂದಾಗಿ ನಮ್ಮ ದೇಶದಲ್ಲಿ ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದಿರುವ ಹಲವಾರು ಆಚರಣೆಗಳು ಇನ್ನು ಮೇಲೆ ಮುಂದುವರಿಯದಂತೆಯೂ ಸಹಿತ ಭಾರತದ ಸಂವಿಧಾನವು

ಎಚ್ಚರಿಕೆ ವಹಿಸುತ್ತದೆ, ಮತ್ತು ಅವುಗಳನ್ನು ಸಂಪೂರ್ಣವಾಗಿ ನಿರ್ಮೂಲ ಗೊಳಿಸುವುದಕ್ಕಾಗಿ ಪರಿಣಾಮಕಾರಿಯಾಗಿರುವ ಹಲವು ನೀತಿ ನಿಯಮ ಗಳನ್ನು ತನ್ನಲ್ಲಿ ಅಳವಡಿಸಿಕೊಂಡಿರುತ್ತದೆ. ಭಾರತದ ಸಂವಿಧಾನದ ೧೭ನೇ ಅನುಚ್ಛೇದವು "ಅಸ್ಪೃಶ್ಯತೆ"ಯನ್ನು ನಿರ್ಮೂಲಗೊಳಿಸುತ್ತದೆ, ಮತ್ತು ಯಾವ ರೂಪದಲ್ಲೂ ಅದರ ಆಚರಣೆಯನ್ನು ನಿಷಿದ್ಧಗೊಳಿಸುತ್ತದೆ. ಅಸ್ಪೃಶ್ಯತೆಯಿಂದಹುಟ್ಟತಕ್ಕ ಯಾವುದೇ ನಿರ್ಯೋಗ್ಯತೆಯನ್ನು ನಿರ್ಬಂಧ ದಿಂದ ಆಚರಣೆಗೆ ತರುವುದು ಕಾನೂನಿನ ದೃಷ್ಟಿಯಲ್ಲಿ ದಂಡನೀಯವಾದ ಅಪರಾಧವಾಗತಕ್ಕದ್ದು ಎಂಬುದಾಗಿಯೂ ಸಹಿತ ಅದು ಘೋಷಿಸುತ್ತದೆ. ಈ ಅಸ್ಪೃಶ್ಯತೆಯನ್ನು ನಿರ್ಮೂಲಗೊಳಿಸುವಲ್ಲಿ ಭಾರತದ ಸಂವಿಧಾನದ ೧೫ (೨)ನೇ ಅನುಚ್ಛೇದವೂ ಸಹಿತ ಸಹಾಯಕಾರಿಯಾಗಿದೆ. "ಕೇವಲ ಜಾತಿಯ ಆಧಾರದ ಮೇಲಿಂದ ಯಾವನೊಬ್ಬ ನಾಗರಿಕನೂ ಅಂಗಡಿಗಳು, ಸಾರ್ವಜನಿಕ ಉಪಹಾರ ಗೃಹಗಳು, ಹೋಟೆಲುಗಳು, ಮತ್ತು ಸಾರ್ವ ಜನಿಕ ಮನೋರಂಜನ ಸ್ಥಳಗಳು ಇವುಗಳಿಗೆ ಪ್ರವೇಶದ ಸಂಬಂಧದಲ್ಲ; ಅಥವಾ ಪೂರ್ಣವಾಗಿ ಅಥವಾ ಭಾಗಶಃ ರಾಜ್ಯನಿಧಿ ಪೋಷಿತ ಅಥವಾ ಸಾರ್ವ ಜನಿಕ ಉಪಯೋಗಕ್ಕಾಗಿ ಸಮರ್ಪಿತವಾದ ಭಾವಿಗಳನ್ನು, ಕೆರೆಗಳನ್ನು, ಸ್ನಾನ ಘಟ್ಟಗಳನ್ನು, ರಸ್ತೆಗಳನ್ನು ಮತ್ತು ಸರ್ವಜನರು ಸೇರುವ ಸ್ಥಳ ಗಳನ್ನು ಉಪಯೋಗಿಸುವ ಸಂಬಂಧದಲ್ಲಿ; ಯಾವುದೊಂದು ನಿರ್ಯೋಗ್ಯತೆ, ಬದ್ಧತೆ, ನಿರ್ಬಂದ ಅಥವಾ ಷರತ್ತಿಗೆ ಒಳಪಟ್ಟಿರತಕ್ಕದಲ್ಲ" ಎಂಬುದಾಗಿ ೧೫ (೨)ನೇ ಅನುಚ್ಛೇದದಲ್ಲಿ ಹೇಳಲಾಗಿದೆ.

ಮನುಷ್ಯರು ತಮ್ಮ ನಿತ್ಯದ ಜೀವನದಲ್ಲಿ ಪಾಲಿಸಬೇಕಾಗಿರುವ ನೀತಿ ನಿಯಮಾವಳಿಗಳನ್ನು ಮತ್ತು ಆಚರಣೆಗಳನ್ನು ಒಳಗೊಂಡಿರುವ 'ಧರ್ಮ'ವು ಪ್ರತಿಯೊಬ್ಬ ಮನುಷ್ಯನ ವ್ಯಕ್ತಿತ್ವದ ವಿಕಾಸಕ್ಕೆ ಅನುವು ಮಾಡಿಕೊಟ್ಟು ಆತನು ಒಳ್ಳೆಯ ಮಾನವನಾಗುವಂತೆ ಮಾಡುವ ಉದ್ದೇಶವನ್ನು ಹೊಂದಿ ರುತ್ತದೆ. ಆದರೆ ಸಮಾಜವನ್ನು ಗುಂಪು ಗುಂಪುಗಳಾಗಿ ವಿಂಗಡನೆ ಮಾಡುವ "ಜಾತಿ ಪದ್ಧತಿ"ಯು ಯಾವುದೇ ಒಳ್ಳೆಯ ಉದ್ದೇಶವನ್ನು ಹೊಂದಿರುವುದಿಲ್ಲ. ಧರ್ಮ ಮತ್ತು ಜಾತಿ ಇವುಗಳ ನಡುವೆ ಯಾವುದೇ ಸಂಬಂಧವಿಲ್ಲ. ಮಾನ

ವಿನಯತೆ, ದಯೆ, ಸತ್ಯ, ಅಹಿಂಸೆ,.... ಮುಂತಾದ ಮೌಲ್ಯಗಳನ್ನು ಒಳಗೊಂಡು, ಸಕಲ ಜೀವಾತ್ಮರಿಗೂ ಲೇಸನ್ನು ಬಯಸುವ ಉದ್ದೇಶದಿಂದ ನೈಸರ್ಗಿಕ ಸತ್ಯಗಳನ್ನಾಧರಿಸಿ ರೂಪುಗೊಂಡಿರುವುದು 'ಧರ್ಮ' ಎನಿಸಿಕೊಳ್ಳುತ್ತದೆ ಮನುಷ್ಯರು ತಮ್ಮ ಹೊಟ್ಟೆಪಾಡಿಗಾಗಿ ಹಿಂದಿನ ಕಾಲದಿಂದಲೂ ಮಾಡುತ್ತಾ ಬಂದಿರುವ ಉದ್ಯೋಗಗಳನ್ನಾಧರಿಸಿಯೋ, ಅಥವಾ ಇನ್ನಾವುದೋ ಕ್ಷುಲ್ಲಕ ಕಾರಣಕ್ಕಾಗಿ ಬೆಳೆದು ಬಂದಿರಬಹುದಾದ ಜಾತಿ ಪದ್ಧತಿಯು ಸಮಾಜದ ಒಳಿತಿಗೆ ಯಾವುದೇ ರೀತಿಯಲ್ಲಿಯೂ ಪ್ರಯೋಜನಕಾರಿಯಾಗಿರುವುದಿಲ್ಲ. ಆದರೆ ಪ್ರತಿಯೊಬ್ಬ ಮನುಷ್ಯನು ತನ್ನಲ್ಲಿರುವ ಪಶು ವೃತ್ತಿಯನ್ನು ತೊಡೆದು ಹಾಕಿ ಧರ್ಮದ ಒಳ್ಳೆಯ ತತ್ತ್ವಗಳನ್ನು ತನ್ನ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳುವುದರ ಮೂಲಕವಾಗಿ ಒಳ್ಳೆಯ ಮಾನವನಾಗಬೇಕಾದ ಅವಶ್ಯಕತೆ ಇರುತ್ತದೆ ಎಂಬುದನ್ನು ಎಲ್ಲರೂ ಒಪ್ಪಿಕೊಳ್ಳಲೇಬೇಕು.

ಪ್ರತಿಯೊಂದು ಧರ್ಮವು ಒಳ್ಳೆಯ ಉದ್ದೇಶವನ್ನಿಟ್ಟುಕೊಂಡೇ ಜನ್ಮ ತಾಳಿರುತ್ತದೆ, ಮತ್ತು ಅದು ಒಳ್ಳೆಯದನ್ನೇ ಬೋಧಿಸುತ್ತದೆ. ಭಾರತದ ಸಂವಿಧಾನವು ಜಾತಿಗಳಿಗೆ ಯಾವುದೇ ಮಹತ್ವವನ್ನು ಕೊಡುವದಿಲ್ಲ ಮತ್ತು ಜಾತಿ ಪದ್ಧತಿಯಿಂದ ಹುಟ್ಟಿಕೊಂಡು ಬಂದಿರುವ "ಅಸ್ಪೃಶ್ಯತೆ"ಯಂತಹ ಅನಿಷ್ಠ ಆಚರಣೆಗಳನ್ನು ನಿರ್ಮೂಲಗೊಳಿಸಲು ಪ್ರಯತ್ನಿಸುತ್ತದೆ, ಎಂದ ಮಾತ್ರಕ್ಕೆ ಅದು ನಮ್ಮ ದೇಶದಲ್ಲಿರುವ ಧರ್ಮಗಳಿಗೂ ಸಹಿತ ಯಾವುದೇ ಮಹತ್ವವನ್ನು ಕೊಡುವದಿಲ್ಲ ಎಂಬುದಾಗಿ ತಿಳಿದುಕೊಳ್ಳಬಾರದು. ಭಾರತದ ಸಂವಿಧಾನವು ಧರ್ಮಗಳ ವಿಷಯದಲ್ಲಿ ತಟಸ್ಥ ನೀತಿಯನ್ನು ಅನುಸರಿಸುತ್ತದೆ, ಮತ್ತು ಅದು ಈ ದೇಶದಲ್ಲಿರುವ ಎಲ್ಲ ಧರ್ಮಗಳಿಗೂ ಸಮಾನವಾದ ಸ್ಥಾನ ಮಾನವನ್ನು ನೀಡುತ್ತದೆ ಎಂಬುದನ್ನು ನಾವೀಗಾಗಲೇ ತಿಳಿದುಕೊಂಡಿದ್ದೇವೆ. ಭಾರತದ ಸಂವಿಧಾನವು ಈ ದೇಶದಲ್ಲಿರುವ ಎಲ್ಲ ಧರ್ಮಗಳನ್ನು ಗೌರವಿಸುತ್ತದೆ ಎಂಬುದನ್ನು ನಾವಿಲ್ಲಿ ಮರೆಯಬಾರದು. ಇಷ್ಟೇ ಅಲ್ಲದೇ ನಮ್ಮ ದೇಶದಲ್ಲಿರುವ ಎಲ್ಲ ಧರ್ಮಗಳನ್ನು ಪೋಷಿಸಿಕೊಂಡು ಹೋಗುವ ಉದ್ದೇಶದಿಂದ ಭಾರತದ ಸಂವಿಧಾನದ ಮೂರನೆಯ ಭಾಗದಲ್ಲಿರುವ ೨೫ ರಿಂದ ೨೮ ರವರೆಗಿನ ಅನುಚ್ಛೇದಗಳು ಪ್ರತಿಯೊಬ್ಬ ಭಾರತೀಯನಿಗೂ ಧಾರ್ಮಿಕ

ಸ್ವಾತಂತ್ರ್ಯವನ್ನು ನೀಡುತ್ತವೆ. ಈ ಅನುಚ್ಛೇದಗಳು ಧರ್ಮ ನಿರಪೇಕ್ಷತಾ ನೀತಿಗೆ ಒಂದು ನಿರ್ದಿಷ್ಟವಾದ ಸ್ವರೂಪವನ್ನು ಕೊಡುತ್ತವೆ. ಭಾರತದ ಪ್ರಜೆಗಳು ತಮಗೆ ಬೇಕೆನಿಸಿದ ಯಾವುದೇ ಧರ್ಮವನ್ನು ಪಾಲಿಸಬಹು ದಾಗಿದೆ. ದೇಶದಲ್ಲಿರುವ ಪ್ರತಿಯೊಂದು ಧರ್ಮದ ಅನುಯಾಯಿಗಳಿಗೂ ತಮ್ಮ ತಮ್ಮ ಧರ್ಮದ ಆಚರಣೆಗಳನ್ನು ನಿರ್ಭಾದಿತವಾಗಿ, ನಿರಾತಂಕವಾಗಿ ನಡೆಸಿಕೊಂಡು ಬರಲು ಮತ್ತು ಪ್ರಚಾರ ಮಾಡಲು ಮೂಲಭೂತ ಹಕ್ಕನ್ನು (Fundamental Right to Profess Practice and Propagate Religion) ಸಂವಿಧಾನವು ನೀಡುತ್ತದೆ. ಧರ್ಮದ ಒಳ್ಳೆಯ ತತ್ತ್ವಗಳು ಎಲ್ಲರಿಗೂ ತಿಳಿಯಲಿ ಎಂಬ ಉದ್ದೇಶದಿಂದ ಪ್ರತಿಯೊಬ್ಬ ಭಾರತೀಯನು ತಾನೇ ನೇರವಾಗಿ ಅಥವಾ ಧಾರ್ಮಿಕ ಸಂಸ್ಥೆಯೊಂದರ ಮುಖಾಂತರ ವಾಗಿ ಧರ್ಮದ ತತ್ತ್ವಗಳನ್ನು ಇತರರಿಗೆ ತಿಳಿಸುವ ಹಕ್ಕನ್ನು ಪಡೆದಿರು ತ್ತಾನೆ. ಎಲ್ಲ ಧರ್ಮಗಳ ಜನರು ತಮ್ಮ ತಮ್ಮ ಧಾರ್ಮಿಕ ಸಂಸ್ಥೆಗಳನು ಸ್ಥಾಪಿಸಿಕೊಂಡು ಅವುಗಳ ಜೀಳರ್ಣಗೆಗೆ ಬೇಕಾದ ಧನ, ದಾನ್ಯ, ಆಸ್ತಿ ಇವುಗಳನ್ನು ಗಳಿಸಬಹುದು, ಸಂಗ್ರಹಿಸಬಹುದು ಮತ್ತು ಅವುಗಳನ್ನು ನಿರ್ಭಾಧಿತವಾಗಿ ನಡೆಸಿಕೊಂಡು ಬರಬಹುದು. ಮುಸಲ್ಮಾನರು ಮಸೀದಿ ಗಳನ್ನು, ಕ್ರೈಸ್ತರು ಚರ್ಚಗಳನ್ನು, ಹಿಂದೂಗಳು ದೇವಾಲಯಗಳನ್ನು ಕಟ್ಟಿ ಮಠಗಳನ್ನು ಸ್ಥಾಪಿಸಿ ಬೇರೆ ಧರ್ಮದ ಜನರಿಗೆ ತೊಂದರೆಯಾಗದಂತೆ ತಮ್ಮ ಧಾರ್ಮಿಕ ಸಂಸ್ಥೆಗಳನ್ನು ನಡೆಸಿಕೊಂಡು ಬರಬಹುದು. ಈ ದಿಸೆಯಲ್ಲಿ ಭಾರತನ ಸಂವಿಧಾನವಾಗಲೀ ಅಥವಾ ಭಾರತ ಸರಕಾರವಾಗಲೀ ಯಾವ ಅಡ್ಡಿ ಆಡಚಣೆಗಳನ್ನು ಉಂಟು ಮಾಡುವದಿಲ್ಲ. ಆದರೆ ಧಾರ್ಮಿಕ ಸಂಸ್ಥೆ ಗಳು ಧರ್ಮದ ಹೆಸರಿನಲ್ಲಿ ದೇಶದ ಸಾರ್ವಜನಿಕ ವ್ಯವಸ್ಥೆ, ಸದಾಚಾರ ಮತ್ತು ಆರೋಗ್ಯ ಇವುಗಳಿಗೆ ಧಕ್ಕೆಯನ್ನುಂಟು ಮಾಡುವಂತಹ ಯಾವುದೇ ಕಾರ್ಯದಲ್ಲಿ ತೊಡಗಬಾರದು ಎಂಬುದಾಗಿಯೂ ಸಹ ಸಂವಿಧಾನವು ಎಚ್ಚ ರಿಕೆ ನೀಡುತ್ತದೆ. ಅಂತಹ ಯಾವುದೇ ಚಟುವಟಿಕೆಗಳನ್ನು ಭಾರತ ಸರ ಕಾರವು ಸಹಿಸಿಕೊಳ್ಳುವುದಿಲ್ಲ.

ಈ ರೀತಿಯಾಗಿ, ಜಾತಿ ಪದ್ಧತಿಯನ್ನು ನಿರ್ಮೂಲಗೊಳಿಸಿ, ಎಲ್ಲ ಧರ್ಮಗಳನ್ನು ಗೌರವಿಸಿ ಪೋಷಿಸಿಕೊಂಡು ಬರಲು ಅವಕಾಶವನ್ನುಂಟು ಮಾಡುವುದರ ಮೂಲಕವಾಗಿ ಭಾರತದ ಸಂವಿಧಾನವು "ನಾವೂ ಬಾಳ ಬೇಕು ಮತ್ತು ಇತರರೂ ಬದುಕುವುದಕ್ಕೆ ಅವಕಾಶವನ್ನು ಕಲ್ಪಿಸಬೇಕು" ಎಂಬ ನೀತಿಯನ್ನು ಎತ್ತಿ ಹಿಡಿಯುತ್ತದೆ. ಜಾತಿ ಪದ್ಧತಿಯು ಅನಾವಶ್ಯಕ ವಾಗಿರುವುದು. ಆದರೆ ಮನುಷ್ಯನು ತನ್ನ ಜೀವನದಲ್ಲಿ ಶಾಂತಿ ಸಮಾಧಾ ನಗಳನ್ನು ಸಂಪಾದಿಸಿಕೊಂಡು ಸುಖಮಯವಾದ ಜೀವನವನ್ನು ನಡೆಸು ವಂತಾಗಬೇಕಾದರೆ ಧರ್ಮ ಮತ್ತು ಧರ್ಮಪಾಲನೆ ಇವು ಎಲ್ಲ ಮಾನವರಿಗೂ ಅತ್ಯಾವಶ್ಯಕವಾಗಿರುವವು.

## ಪಂಚ ಪೀಠಗಳು

ಭಾರತ ದೇಶದಲ್ಲಿರುವ ಎಲ್ಲ ಧರ್ಮ ಹಾಗೂ ಮತ ಪಂಥಗಳ ಜನರು ತಮ್ಮ ತಮ್ಮ ಧರ್ಮಗಳನ್ನು ಉಳಿಸಿ, ಬೆಳೆಸಿಕೊಂಡು ಬರಲು ಅನೇಕ ಮಠ ಮಂದಿರಗಳನ್ನು ಸ್ಥಾಪಿಸಿರುವರು. ಈ ದೇಶದಲ್ಲಿರುವ ಅಸಂಖ್ಯಾತ ಮಂದಿರ ಗಳಲ್ಲಿ ಕೊಲ್ಲಿಪಾಕಿಯ ಶ್ರೀ ಸೋಮೇಶ್ವರ, ಉಜ್ಜಯಿನಿಯ ಶ್ರೀ ಸಿದ್ಧೇಶ್ವರ, ಕೇದಾರದ ಶ್ರೀರಾಮನಾಥ, ಶ್ರೀ ಶೈಲದ ಶ್ರೀ ಮಲ್ಲಿಕಾರ್ಜುನ, ಮತ್ತು ಕಾಶಿಯ ಶ್ರೀ ವಿಶ್ವನಾಥ ದೇವಾಲಯಗಳು ಅತ್ಯಂತ ಪ್ರಾಚೀನ ಇತಿಹಾಸ ವನ್ನು ಹೊಂದಿರುತ್ತವೆ. ಈ ಐದು ಲಿಂಗಗಳಿಂದ ಉದ್ಭವಿಸಿದವರೆಂಬ ಪ್ರತೀತಿ ಯನ್ನು ಹೊಂದಿರುವ ಐದು ಜನ ಮಹಾಚಾರ್ಯರು ದೇಶದ ಬೇರೆ ಬೇರೆ ಭಾಗಗಳಲ್ಲಿ ಐದು ಮಠಗಳನ್ನು ಸ್ಥಾಪಿಸಿರುವರು. ಈ ಐದು ಮಠಗಳೇ ಪಂಚ ಪೀಠಗಳೆಂಬುದಾಗಿ ಪ್ರಸಿದ್ಧಿ ಪಡೆದಿವೆ. ಶ್ರೀ ರಂಭಾಪುರೀ ಪೀಠ, ಶ್ರೀ ಉಜ್ಜಯಿನಿ ಪೀಠ, ಶ್ರೀ ಕೇದಾರ ಪೀಠ, ಶ್ರೀ ಶ್ರೀಶೈಲ ಪೀಠ ಮತ್ತು ಶ್ರೀ ಕಾಶಿಪೀಠ ಎಂಬ ಹೆಸರುಗಳಿಂದ ಕರೆಯಲ್ಪಡುವ ಈ ಪಂಚ ಪೀಠಗಳು ಈ ದೇಶದ ಅತ್ಯಂತ ಪ್ರಾಚೀನ ಕಾಲದ ಮಠಗಳಾಗಿರುತ್ತವೆ. ಈ ಐದು ಮಠಗಳ ಪೀಠಗಳಿಗೆ ಅನುಕ್ರಮವಾಗಿ ವೀರಸಿಂಹಾಸನ, ಸದ್ಧರ್ಮ ಸಿಂಹಾಸನ, ವೈರಾಗ್ಯ ಸಿಂಹಾಸನ, ಸೂರ್ಯ ಸಿಂಹಾಸನ ಮತ್ತು ಜ್ಞಾನ ಸಿಂಹಾಸನ ಎಂದು ಕರೆಯುತ್ತಾರೆ. ಈ ಪಂಚಪೀಠಗಳು ಅನುಕ್ರಮವಾಗಿ ಸದ್ಯೋ

ಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಎಂಬ ಹೆಸರಿನ ಶಿವನ ಐದು ಮುಖಗಳನ್ನು ಸಂಕೇತಿಸುತ್ತವೆ. ಈ ಐದು ಮಠಗಳ ಪೀಠಾಧ್ಯಕ್ಷರುಗಳಿಗೆ ಪಂಚಾಚಾರ್ಯರು ಎಂಬುದಾಗಿ ಕರೆಯುತ್ತಾರೆ. ಪರಶಿವನ ಇಚ್ಛಾನುಸಾರವಾಗಿ ಧರ್ಮವನ್ನು ಸ್ಥಾಪಿಸುವುದಕ್ಕಾಗಿ ಪ್ರತಿಯೊಂದು ಯುಗದ ಆದಿಯಲ್ಲಿಯೂ ಪಂಚಾಚಾರ್ಯರು ಅವತರಿಸಿರುವರು ಎಂಬ ಸಂಗತಿಯು ಈ ಪಂಚಪೀಠಗಳ ಪರಂಪರೆಯಿಂದ ತಿಳಿದು ಬರುತ್ತದೆ. ಯುಗದ ಆದಿಯಲ್ಲಿ ಅವತರಿಸಿದ ಮೂಲ ಪಂಚಾಚಾರ್ಯರ ಪರಂಪರೆಯನ್ನು ನಂತರದ ಆಚಾರ್ಯರು ಮುಂದುವರಿಸಿಕೊಂಡು ಬಂದಿರುವರು. ಈ ಮೂಲ ಪಂಚಾಚಾರ್ಯರನ್ನು ಲಿಂಗೋದ್ಭವ ಮೂರ್ತಿಯ ರೂಪದಲ್ಲಿ ಪೂಜಿಸುವ ರೂಢಿಯು ಪ್ರಾಚೀನ ಕಾಲದಿಂದ ಬೆಳೆದು ಬಂದಿರುವದು. ಗಮನಾರ್ಹವಾದ ಸಂಗತಿಯಾಗಿರುವುದು, ಕೃತಯುಗ, ತ್ರೇತಾಯುಗ, ಮತ್ತು ದ್ವಾಪರ ಯುಗಗಳ ನಂತರ ಈಗ ನಡೆಯುತ್ತಿರುವ ಈ ಕಲಿಯುಗದ ಆದಿಯಲ್ಲಿ ಅವತರಿಸಿದ ಪಂಚಾಚಾರ್ಯರ ಪರಂಪರೆಯನ್ನು ಅವರ ನಂತರದ ಆಚಾರ್ಯರು ಮುಂದುವರಿಸಿಕೊಂಡು ಬಂದಿರುವರು. ಈ ರೀತಿಯಾಗಿ ಪ್ರಾಚೀನ ಕಾಲದಿಂದ ನಡೆದು ಬಂದಿರುವ ಪಂಚಾಚಾರ್ಯರ ಮಹಾ ಪರಂಪರೆಯನ್ನು ಮುಂದುವರಿಸಿಕೊಂಡು ನಡೆದಿರುವ ಈಗಿನ ಪಂಚಾಚಾರ್ಯರೆಂದರೆ ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರರುದ್ರ ಮುನಿದೇವ ಶಿವಾಚಾರ್ಯರು (ರಂಭಾಪುರಿ), ಶ್ರೀ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯರು (ಉಜ್ಜಯಿನಿ), ಶ್ರೀ ಜಗದ್ಗುರು ಸಿದ್ದೇಶ್ವರಲಿಂಗ ಶಿವಾಚಾಚಾರ್ಯರು (ಕೇದಾರ), ಶ್ರೀ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯರು (ಶ್ರೀಶೈಲ), ಮತ್ತು ಶ್ರೀ ಜಗದ್ಗುರು ಡಾ : ಚಂದ್ರಶೇಖರ ಶಿವಾಚಾರ್ಯರು (ಕಾಶಿ).

ಶ್ರೀ ರಂಭಾಪುರಿ ಪೀಠವು ಕರ್ನಾಟಕ ರಾಜ್ಯದ ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಮಲಯ ಪರ್ವತ ಪ್ರದೇಶದಲ್ಲಿ ಸ್ಥಾಪಿಸಲ್ಪಟ್ಟಿರುವುದು. ಶ್ರೀ ಉಜ್ಜಯಿನಿ ಪೀಠವು ಮೊದಲು ಮಧ್ಯ ಪ್ರದೇಶ ರಾಜ್ಯದಲ್ಲಿ ಇತ್ತು. ಅದು ಪ್ರಾಚೀನ ಕಾಲದಲ್ಲಿ ಮಾಳವ ದೇಶ ಎಂದು ಕರೆಯಲ್ಪಟ್ಟಿರುವ ಇಂದಿನ ಮಧ್ಯ ಪ್ರದೇಶ ರಾಜ್ಯದ ಕ್ಷಿಪ್ರಾ ನದಿಯ ದಡದಲ್ಲಿರುವ ಮಹಾಕಾಲ ಉಜ್ಜ

ಯಿನಿಯ ವಟಕ್ಷೇತ್ರದಲ್ಲಿ ಇತ್ತು. ನಂತರ ಶ್ರೀ ಜಗದ್ಗುರು ಮರುಳಸಿದ್ಧರ ಕಾಲದಲ್ಲಿ ಈ ಪೀಠವು ಕರ್ನಾಟಕ ರಾಜ್ಯಕ್ಕೆ ಸ್ಥಳಾಂತರಿಸಲ್ಪಟ್ಟಿತು. ಮಧ್ಯ ಪ್ರದೇಶ ರಾಜ್ಯದ ಆಗಿನ ಪರಮತಿಯರ ಉಪದ್ರವದಿಂದಾಗಿ ಶ್ರೀ ಜಗದ್ಗುರು ಮರುಳಸಿದ್ಧರು ಉಜ್ಜಯಿನಿಯ ಪರಿಸರವನ್ನು ತ್ಯಾಗ ಮಾಡಿ ಶಿಷ್ಯ ಸಮೇತರಾಗಿ ಮಹಾರಾಷ್ಟ್ರದ ಅನೇಕ ಭಾಗಗಳಲ್ಲಿ ಸಂಚರಿಸಿ ಕೊನೆಗೆ ಶ್ರೀ ಜಗದ್ಗುರು ರೇವಣಸಿದ್ಧರ ಸಲಹೆಯ ಮೇರೆಗೆ ಕರ್ನಾಟಕ ರಾಜ್ಯದ ಕೊಟ್ಟೂರ ಬಳಿಯಲ್ಲಿ ಉಜ್ಜಯಿನಿ ಎಂಬ ಹೊಸ ಪಟ್ಟಣವನ್ನು ನಿರ್ಮಾಣ ಗೊಳಿಸಿ ಅಲ್ಲಿಯೇ ಸದ್ಧರ್ಮ ಪೀಠವನ್ನು ಪುನಃ ಸ್ಥಾಪಿಸಿದರು. ಶ್ರೀ ಕೇದಾರ ಪೀಠವು ಹಿಮಾಲಯ ಪರ್ವತ ಪ್ರದೇಶದಲ್ಲಿ ಇರುತ್ತದೆ. ಉತ್ತರ ಪ್ರದೇಶ ರಾಜ್ಯದ ಚಮೋಲಿ ಜಿಲ್ಲೆಯಲ್ಲಿ ಕೇದಾರ ಪೀಠಕ್ಕೆ ಸಂಬಂಧಿಸಿದ ಒಂದು ಮಠವಿರುತ್ತದೆ. ಅದನ್ನು "ಓಖೀಮಠ" ಎಂದು ಕರೆಯುತ್ತಾರೆ. ಚಳಿಗಾಲದ ಸಮಯದಲ್ಲಿ ಕೇದಾರ ಪೀಠದ ಜಗದ್ಗುರುಗಳ ವಾಸ್ತವ್ಯವು ಓಖೀಮಠದಲ್ಲಿ ಇರುತ್ತದೆ. ಶ್ರೀಶೈಲ ಪೀಠವು ಆಂಧ್ರ ಪ್ರದೇಶ ರಾಜ್ಯ ದಲ್ಲಿಯ ಶ್ರೀಶೈಲ ಕ್ಷೇತ್ರದಲ್ಲಿ ಇರುತ್ತದೆ. ಶ್ರೀ ಕಾಶಿ ಪೀಠವು ಉತ್ತರ ಪ್ರದೇಶದ ರಾಜ್ಯದಲ್ಲಿರುವ ಕಾಶಿಕ್ಷೇತ್ರ (ವಾರಣಾಸಿ)ದಲ್ಲಿ ಇರುತ್ತದೆ.

ಈ ಪಂಚ ಪೀಠಗಳ ಆಚಾರ್ಯರು ಸಾಮಾಜಿಕ ಜೀವನದಲ್ಲಿ ತಿಳಿಯ ನ್ನುಂಟು ಮಾಡಲು ಸರ್ವತ್ರ ಸಂಚರಿಸಿದರು. ಇವರು ಭಾರತ ದೇಶದ ಅನೇಕ ಕಡೆಗಳಲ್ಲಿ ಸಂಚರಿಸಿ ಧರ್ಮವನ್ನು ಬೋಧಿಸಿರುವರು. ಇವರು ಅಗಸ್ತ್ಯ, ದಧೀಚಿ, ವ್ಯಾಸ, ಸಾನಂದ ಮತ್ತು ದೂರ್ವಾಸ ಮುಂತಾದ ಅನೇಕ ಮುನಿಗಳಿಗೆ ಶಿವಸಿದ್ಧಾಂತವನ್ನು ಮೊಟ್ಟ ಮೊದಲಿಗೆ ಬೋಧಿಸಿದರು. ಮಾತಂಗ, ಮಣಿಭದ್ರ, ಸತ್ಯೇಂದ್ರ ಮೊದಲಾದವರಿಗೆ ಶಿವ ಸಂದೇಶವನ್ನು ತಲುಪಿಸಿ ಅವರಲ್ಲಿ ಶಿವನರಿವನ್ನು ಮೂಡಿಸಿ ಉದ್ಧರಿಸಿರುವ ಈ ಪಂಚಾ ಚಾರ್ಯರು ಅಸ್ಪೃಶ್ಯರನ್ನು ಉದ್ಧಾರ ಗೈದ ಪ್ರಾಚೀನಾಚಾರ್ಯರಾಗಿ ರುವರು. ಭಾರತ ದೇಶದ ಇತಿಹಾಸದುದ್ದಕ್ಕೂ ಇಲ್ಲಿ ಆಗಿಹೋಗಿರುವ ಅನೇಕ ರಾಜ ಮಹಾರಾಜರುಗಳಿಂದ ಪೂಜಿತರಾಗಿರುವ ಈ ಪಂಚಾ ಚಾರ್ಯರು ಹಲವಾರು ಬಿರುದಾವಳಿಗಳನ್ನು ಪಡೆದಿರುವುದನ್ನು ನಾವು

ಕಾಣುತ್ತೇವೆ. ಭಾರತ ದೇಶದ ಬೇರೆ ಬೇರೆ ಭಾಗಗಳಲ್ಲಿ ಸ್ಥಾಪಿಸಲ್ಪಟ್ಟಿರುವ ಈ ಪಂಚಪೀಠಗಳು ಪ್ರಾಚೀನ ಕಾಲದಿಂದಲೂ ಈ ದೇಶದ ಸಾಂಸ್ಕೃತಿಕ ಐಕ್ಯತೆಯನ್ನು ಕಾಪಾಡಿಕೊಂಡು ಬಂದಿರುತ್ತವೆ. ಇವು ಬೇರೆ ಬೇರೆ ಭಾಗಗಳಲ್ಲಿ ವಾಸಿಸುವ ಮತ್ತು ಬೇರೆ ಬೇರೆ ಭಾಷೆಗಳನ್ನಾಡುವ ಈ ದೇಶದ ಜನರಲ್ಲಿ ನಾವೆಲ್ಲರೂ ಒಂದೇ ಎಂಬ ಐಕ್ಯತೆಯ ಮನೋಭಾವನೆಯನ್ನು ಅತಿಯಾದ ಪ್ರಾಚೀನ ಕಾಲದಿಂದಲೂ ಜಾಗೃತವಾಗಿ ಕಾಪಾಡಿಕೊಂಡು ಬಂದಿರುತ್ತವೆ. ಆದರ್ಶವೂ ಮಾರ್ಗದರ್ಶಕವೂ ಆಗಿರುವ ಈ ಪಂಚ ಪೀಠಗಳು ಪವಿತ್ರ ಜ್ಞಾನ ಕೇಂದ್ರಗಳಾಗಿ ಶೋಭಿಸುತ್ತಿವೆ. ಪಂಚಾಚಾರ್ಯರ ಈ ಐದು ಪೀಠಗಳು ಯಾವಾಗಲೂ ಭಕ್ತವೃಂದಕ್ಕೆ ಆಕರ್ಷಣೀಯವಾಗಿರುವವು.

ಪಂಚ ಪೀಠಗಳ ಪರಂಪರೆಯಲ್ಲಿ ಇದುವರೆಗೆ ಆಗಿ ಹೋಗಿರುವ ಪಂಚಾಚಾರ್ಯರಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಹೆಸರು ಬಹಳಷ್ಟು ಪ್ರಸಿದ್ಧಿ ಪಡೆದಿರುವುದನ್ನು ನಾವು ಕಾಣುತ್ತೇವೆ. ಶ್ರೀ ಜಗದ್ಗುರು ರೇಣುಕ ಗಣಾಧೀಶ್ವರರು ಶ್ರೀ ರಂಭಾಪುರಿ ಪೀಠದ ಮೂಲ ಆಚಾರ್ಯರು. ಯುಗ ಯುಗಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಪ್ರಸಿದ್ಧರಾಗಿರುವ ಇವರು ಮಲಯ ಪರ್ವತದಲ್ಲಿ ವಾಸಿಸುತ್ತಿದ್ದ ಮಹಾಮಹಿಮನಾದ ಶ್ರೀ ಅಗಸ್ತ್ಯ ಮಹರ್ಷಿಗೆ ವೀರಶೈವ ಸಿದ್ಧಾಂತವನ್ನು ಉಪದೇಶಿಸಿದರು. ಆ ಉಪದೇಶವನ್ನೇ ಶ್ರೀ ಶಿವಯೋಗಿ ಶಿವಾಚಾರ್ಯರು ಸಂಗ್ರಹಿಸಿ ಗ್ರಂಥ ರೂಪದಲ್ಲಿ ಬರೆದಿಟ್ಟಿದ್ದಾರೆ. ಷಟಸ್ಥಲಗಳಲ್ಲಿಯ ನೂರೊಂದು ಸ್ಥಲಗಳ ಮರ್ಮವನ್ನು ಒಳಗೊಂಡಿರುವ ಆ ಗ್ರಂಥವೇ ಇಂದು "ಸಿದ್ಧಾಂತ ಶಿಖಾಮಣಿ" "ರೇಣುಕ ಗೀತೆ" ಅಥವಾ "ರೇಣುಕಾಗಮ" ಎಂಬ ಹೆಸರುಗಳಿಂದ ಪ್ರಸಿದ್ಧವಾಗಿದೆ.

"ಮಾನವ ಧರ್ಮಕ್ಕೆ ಜಯವಾಗಲಿ"
"ಧರ್ಮದಿಂದಲೇ ವಿಶ್ವಕ್ಕೆ ಶಾಂತಿ"

ಎಂಬೀ ನುಡಿಮುತ್ತುಗಳು ರಂಭಾಪುರೀ ಪೀಠದ ಲಿಂಗೈಕ್ಯ ಶ್ರೀ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ ಶಿವಾಚಾರ್ಯರ ಜೀವನದ ಉಸಿರಾಗಿದ್ದವು. "ಮುಕ್ತಿ ಮಂದಿರ ಮಹರ್ಷಿ" ಎಂದು ಪ್ರಸಿದ್ಧರಾಗಿರುವ ಇವರು ಪೀಠಾಚಾರ್ಯರಾಗಿದ್ದರೂ ಸಹಿತ ವೈಭವಕ್ಕಿಂತಲೂ ವೈರಾಗ್ಯಕ್ಕೆ

ಹೆಚ್ಚು ಮಹತ್ವವನ್ನು ಕೊಟ್ಟರು. ತಟ್ಟಿನ ಪೋಷಾಕು, ಕಂಬಳಿ, ಬಿಲ್ವ ಫಲಗಳ ಮಾಲೆ, ಕೈಯಲ್ಲಿ ಒಂದು ಮಣ್ಣಿನ ಪಾತ್ರೆ, ಬಡಿಗೆ, ಯೋಗ ದಂಡ, ಮತ್ತು ರುದ್ರಾಕ್ಷಿ ಜಪ ಮಾಲೆ ಇವುಗಳೇ ಮುಕ್ತಿ ಮಂದಿರ ಮಹರ್ಷಿಗಳ ಆಭರಣಗಳಾಗಿದ್ದವು. ಅವರು ತಟ್ಟಿನ ಪೋಷಾಕು ಧರಿಸುತ್ತಿದ್ದುದರಿಂದ ಜನರು ಅವರನ್ನು "ಹರಕು ಪಾಟಿನ ಅರಸು" ಎಂದು ಕರೆಯುತ್ತಿದ್ದರು. ಇವರು ತಮ್ಮ ೭೯ನೇ ವಯಸ್ಸಿನಲ್ಲಿ ದಿನಾಂಕ ೫-೧೦-೧೯೫೭ನೇ ಮಂಗಳವಾರ ರಾತ್ರಿ ೧೧-೩೦ ಕ್ಕೆ ಮುಕ್ತಿ ಮಂದಿರದಲ್ಲಿ ಲಿಂಗೈಕ್ಯರಾದರು. ಪೂಜ್ಯರ ಸಮಾಧಿಯು ಮುಕ್ತಿ ಮಂದಿರದಲ್ಲಿಯೇ ಮಾಡಲ್ಪಟ್ಟಿದೆ. ಇದೇ ಸ್ಥಾನದಲ್ಲಿಯೇ ಎಲ್ಲ ಮಠಾಚಾರ್ಯರ ಶಿಲಾವಿಗ್ರಹಗಳೂ ಪ್ರತಿಷ್ಠಾಪಿಸಲ್ಪಟ್ಟಿರುವುದರಿಂದ ಮುಕ್ತಿಮಂದಿರವು ಸರ್ವ ಧರ್ಮಗಳ ಸಮನ್ವಯ ಕ್ಷೇತ್ರವಾಗಿ ಪರಿಣಮಿಸಿದೆ.

ಮದುವೆ ಮುಂತಾದ ಮಂಗಳ ಕಾರ್ಯಗಳನ್ನು ನೆರವೇರಿಸುವಾಗ ಪಂಚಾಚಾರ್ಯರನ್ನು ಪ್ರತಿನಿಧಿಸುವ ಪಂಚ ಕಲಶಗಳನ್ನು ಸ್ಥಾಪನೆ ಮಾಡಿ ಪಂಚಾಚಾರ್ಯರನ್ನು ಭಕ್ತಿ ಗೌರವಗಳಿಂದ ಸ್ಮರಿಸಿ ಅವರ ಅನುಗ್ರಹವನ್ನು ಪಡೆಯುವ ಪದ್ಧತಿಯು ರೂಢಿಯಲ್ಲಿರುವುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಈ ಪದ್ಧತಿಯು ಪ್ರಾಚೀನ ಕಾಲದಿಂದಲೂ ನಡೆದು ಬಂದಿದ್ದು ಇವತ್ತಿಗೂ ಸಹ ಬಳಕೆಯಲ್ಲಿರುವ ಒಂದು ಸಂಪ್ರದಾಯವಾಗಿರುವುದು. ಶ್ರೀ ಜಗದ್ಗುರು ಪಂಚಾಚಾರ್ಯರನ್ನು ಭಕ್ತಿ ಗೌರವಗಳಿಂದ ಸ್ಮರಿಸಿ ಸನ್ಮಾನಿಸುತ್ತೇವೆ ಅದೇ ರೀತಿಯಾಗಿ ಅವರ ದಿವ್ಯೋಪದೇಶವನ್ನು ಕೇಳಿ ಅದನ್ನು ಆಚರಣೆಯಲ್ಲಿ ಅಳವಡಿಸಿಕೊಂಡು ಸದ್ಭಕ್ತರು, ಸದ್ಗೃಹಸ್ಥರು ಮತ್ತು ಸತ್ಪ್ರಜೆಗಳೂ ಆಗಲು ಸರ್ವರೂ ಪ್ರಯತ್ನಿಸಬೇಕಾಗಿರುವುದೇ ಇಂದಿನ ಅವಶ್ಯಕತೆಯಾಗಿದೆ.

## ಸತ್ಯಂ ಶಿವಂ ಸುಂದರಂ

"ಸತ್ಯವೇ ಶಿವ ಮತ್ತು ಶಿವನು ಸುಂದರ" ಎಂಬುದೇ ಈ ಮೇಲಿನ ಸಂಸ್ಕೃತ ವಾಕ್ಯದ ಅರ್ಥವು.

ನಾವೆಲ್ಲರೂ ಒಂದಿಲ್ಲೊಂದು ವಿಧದಲ್ಲಿ ಸೌಂದರ್ಯೋಪಾಸಕರಾಗಿದ್ದೇವೆ. ನಾವು ಸುಂದರವಾಗಿರುವ ಎಲ್ಲವನ್ನೂ ಬಲು ಬೇಗನೇ ಮೆಚ್ಚಿಕೊಳ್ಳುತ್ತೇವೆ. ಸುಂದರವಾಗಿರುವ ಎಲ್ಲವನ್ನೂ ಬಯಸುತ್ತೇವೆ ಮತ್ತು ಸುಂದರವಾಗಿರುವ ವಸ್ತುವನ್ನು ಪಡೆದುಕೊಳ್ಳಲು ಸರ್ವ ಪ್ರಯತ್ನವನ್ನು ಮಾಡುತ್ತೇವೆ. ಆದರೆ ಯಾವುದು ಸುಂದರ ಎಂಬುದನ್ನು ಅರಿತುಕೊಳ್ಳಲು ಅಸಮರ್ಥರಾಗಿದ್ದೇವೆ.

ನಾವು ಸೌಂದರ್ಯೋಪಾಸಕರಾಗಿರುವಂತೆಯೇ ಶಿವೋಪಾಸಕರೂ ಆಗಿದ್ದೇವೆ. ಸಂತೋಷ, ಸಮಾಧಾನ ಮತ್ತು ಆಶ್ಚರ್ಯಗಳನ್ನು ಏಕ ಕಾಲಕ್ಕೆ ಉಂಟು ಮಾಡುವ ಅಸಂಖ್ಯಾತ ನೈಸರ್ಗಿಕ ಕ್ರಿಯೆಗಳನ್ನು ನಾವು ನಮ್ಮ ನಿತ್ಯದ ಜೀವನದಲ್ಲಿ ಕಾಣುತ್ತೇವೆ. ಜಗತ್ತಿನಲ್ಲಿ ಜರುಗುವ ಈ ಎಲ್ಲ ನೈಸರ್ಗಿಕ ಕ್ರಿಯೆಗಳ ಹಿಂದೆ ಒಬ್ಬ ಸೂತ್ರಧಾರನ ಕೈವಾಡವು ಇರುವುದನ್ನು ನಾವು ಮನಗಾಣುತ್ತೇವೆ, ಮತ್ತು ಆತನ ಇರುವನ್ನು ಮನಸಾರೆ ಒಪ್ಪಿಕೊಳ್ಳುತ್ತೇವೆ. ಆತನೇ ಜಗನ್ನಿಯಾಮಕ. ಆತನೇ ದೇವರು. ಆದರೆ ಆ ದೇವರ ನಿಜ ಸ್ವರೂಪವನ್ನು ಅರಿತುಕೊಳ್ಳಲು ನಾವು ಅಸಮರ್ಥರಾಗಿದ್ದೇವೆ.

ದೇವರ ನಿಜ ಸ್ವರೂಪವನ್ನು ಅರಿತುಕೊಳ್ಳಲು ಅಸಮರ್ಥರಾಗಿರುವ ನಾವು ಆತನನ್ನು ನಮಗೆ ಬೇಕಾದ ರೀತಿಯಲ್ಲಿ ಕಲ್ಪಿಸಿಕೊಂಡಿದ್ದೇವೆ. ನಾವು ಆತನನ್ನು ಹಲವಾರು ಹೆಸರುಗಳಿಂದ ಕರೆಯುತ್ತೇವೆ. ನಮ್ಮಲ್ಲಿ ಕೆಲವರು ಆತನನ್ನು ಶಿವ ಎಂದು ಕರೆದರೆ ಇನ್ನು ಕೆಲವರು ವಿಷ್ಣು ಎಂದು ಕರೆಯುವರು. ಕೆಲವರು ಆತನನ್ನು ಜೀಸಸ್ ಎಂದು ಕರೆದರೆ ಇನ್ನು ಕೆಲವರು ಅಲ್ಲಾ ಎಂದು ಕರೆಯುವರು

ಇರುವ ದೇವರು ಒಬ್ಬನೇ ಆಗಿದ್ದರೂ ಸಹಿತ ನಾವು ಆತನನ್ನು ಹಲವಾರು ಹೆಸರುಗಳಿಂದ ಕರೆದು ಅನೇಕ ಸಮಸ್ಯೆಗಳಿಗೆ ಆಮಂತ್ರಣ ನೀಡಿದ್ದೇವೆ. ನಮ್ಮ ದೇವರು ಬೇರೆ, ನಿಮ್ಮ ದೇವರು ಬೇರೆ ಎನ್ನುವ ಮಟ್ಟಕ್ಕೆ ಇಳಿದಿದ್ದೇವೆ. ಈ ರೀತಿಯ ವರ್ತನೆಯಿಂದಾಗಿ ಹಲವಾರು ಸಮಸ್ಯೆಗಳು ಹುಟ್ಟಿಕೊಂಡಿವೆ. ಆ ಸಮಸ್ಯೆಗಳೆಲ್ಲ ನಮ್ಮೆದುರಿಗೆ ಬಂದಾಗ ಅವುಗಳಿಗೆ

ಸೂಕ್ತವಾದ ಪರಿಹಾರವನ್ನು ಕಂಡುಕೊಳ್ಳುವಲ್ಲಿ ನಾವು ವಿಫಲರಾಗಿದ್ದೇವೆ. ನಾವು ಸ್ವತಃ ನಮ್ಮಿಂದಲೇ ನಿರ್ಮಿಸಲ್ಪಟ್ಟಿರುವ ಬಲೆಯಲ್ಲಿ ಸಿಲುಕಿಕೊಂಡು ಒದ್ದಾಡುತ್ತಿದ್ದೇವೆ. ದೇವರ ನಿಜವಾದ ಸ್ವರೂಪವನ್ನು ತಿಳಿಯದಿರುವುದೆ ಈ ಎಲ್ಲ ಸಮಸ್ಯೆಗಳ ಉದ್ಭವಕ್ಕೆ ಕಾರಣವಾಗಿದೆ. ಆ ದೇವರ ಸ್ವರೂಪವನ್ನೇ ಈ ಮೇಲಿನ ಸಂಸ್ಕೃತ ವಾಕ್ಯವು ನಮಗೆ ತಿಳಿಸುತ್ತದೆ. ಸತ್ಯವೇ ಶಿವ ಮತ್ತು ಶಿವನು ಸುಂದರ ಎಂಬುದನ್ನು ಈ ವಾಕ್ಯವು ಹೇಳುತ್ತದೆ. ನಾವು ಈ ವಾಕ್ಯದ ಅರ್ಥವನ್ನು ಸಂಪೂರ್ಣವಾಗಿ ಅರಿತುಕೊಳ್ಳಲು ಸಮರ್ಥರಾದರೆ ನಮ್ಮೆಲ್ಲ ಸಮಸ್ಯೆಗಳೂ ಪರಿಹಾರವಾಗುತ್ತವೆ.

ಯಾವುದು ನಿಜವಾದ ಸೌಂದರ್ಯ ? ಎಲ್ಲರೂ ಕೂಡಿ ಪರಸ್ಪರ ಪ್ರೀತಿ ಗೌರವ ಮತ್ತು ಸಹಕಾರಗಳಿಂದ ಬದುಕುವುದು ಸುಂದರವೊ ? ಅಥವಾ ಪರಸ್ಪರ ದ್ವೇಷ ಮತ್ತು ಅಸೂಯೆಗಳನ್ನು ಬೆಳೆಸಿಕೊಂಡು ಒಬ್ಬರಿಗೊಬ್ಬರು ಕಚ್ಚಾಡುತ್ತ ಬದುಕುವುದು ಸುಂದರವೊ ? ಕೂಡಿ ಬಾಳುವುದರಿಂದ ಸುಂದರ ವಾದ ಸಮಾಜ ನಿರ್ಮಾಣವಾಗುತ್ತದೆ. ಪರಸ್ಪರ ದ್ವೇಷ ಮತ್ತು ಅಸೂಯೆ ಗಳನ್ನು ಬೆಳೆಸಿಕೊಂಡು ಒಬ್ಬರಿಗೊಬ್ಬರು ಕಚ್ಚಾಡುತ್ತ ಬದುಕಿದರೆ ಬದುಕು ಅಸಹನೀಯವಾಗುತ್ತದೆ. ಮನುಷ್ಯ ಮನುಷ್ಯರ ಮಧ್ಯದಲ್ಲಿ ಭೇದ ಭಾವಗಳನ್ನು ಕಲ್ಪಿಸಿಕೊಂಡು ಪರಸ್ಪರ ದ್ವೇಷ ಮತ್ತು ಅಸೂಯೆ ಗಳನ್ನು ಬೆಳೆಸಿಕೊಂಡು ಒಬ್ಬರಿಗೊಬ್ಬರು ಕಚ್ಚಾಡುತ್ತ ಬದುಕಿರುವ ನಾವು ನಿಸರ್ಗದತ್ತವಾದ ಸೌಂದರ್ಯವನ್ನು ಹಾಳು ಮಾಡಿದ್ದೇವೆ. "ಯಾವುದು ಸುಂದರ ?'' ಎಂಬುದನ್ನು ಅರಿಯದ ನಾವು ''ಯಾವುದು ಸತ್ಯ ?" ಎಂಬುದನ್ನು ತಿಳಿದುಕೊಳ್ಳಲು ಅಸಮರ್ಥರಾಗಿದ್ದೇವೆ. ಸತ್ಯವನ್ನು ತಿಳಿಯಲು ಅಸಮರ್ಥರಾಗಿರುವ ಕಾರಣ ದಿಂದಲೇ ನಾವು ಶಿವನ ಸ್ವರೂಪ-ವನ್ನು ತಿಳಿಯುವಲ್ಲಿ ವಿಫಲರಾಗಿದ್ದೇವೆ.

ಯಾವುದು ಸತ್ಯ ? ಸತ್ಯ ಶೋಧನೆಯನ್ನೇ ಗುರಿಯಾಗಿರಿಸಿಕೊಂಡು ಇಂದಿನ ಆಧುನಿಕ ಜಗತ್ತಿನ ವಿಜ್ಞಾನಿಗಳು ಹಗಲಿರುಳು ಶ್ರಮಿಸುತ್ತಿರುವರು. ಅಸಂಖ್ಯಾತ ಸಂಶೋಧನೆಗಳನ್ನು ಯಶಸ್ವಿಯಾಗಿ ಮಾಡಿರುವ ವಿಜ್ಞಾನಿ ಗಳು ಆ ದೇವರ ಅಸ್ತಿತ್ವವನ್ನು ಅಲ್ಲಗಳೆಯ ಬಲ್ಲರೆ ? ಜಗನ್ನಿಯಾಮಕನ ಅಸ್ತಿತ್ವವನ್ನು ಅಲ್ಲಗಳೆಯುವ ವಿಜ್ಞಾನಿಗಳು ಅಂತಿಮ ಸತ್ಯವನ್ನು ಕಂಡು

ಹಿಡಿಯಬಲ್ಲರೆ ? ಆ ಜಗನ್ನಿಯಾಮಕನ ಲೀಲೆಯಿಂದಲೇ ಅಲ್ಲವೇ ವಿಜ್ಞಾನಿಗಳ ಸಂಶೋಧನೆಗೆ ವಸ್ತು ದೊರಕಿರುವುದು ? ಆ ಜಗನ್ನಿಯಾಮಕನ ಅಸ್ತಿತ್ವವನ್ನು ಅಲ್ಲಗಳೆಯುವುದು ಯಾರಿಂದಲೂ ಸಾಧ್ಯವಿಲ್ಲ. ಆ ಜಗನ್ನಿಯಾಮಕನ ಅಸ್ತಿತ್ವವನ್ನು ಒಪ್ಪಿಕೊಳ್ಳದ ವಿಜ್ಞಾನಿಯು ವಿಜ್ಞಾನಿ ಎನಿಸಿಕೊಳ್ಳಲಾರನು. ಅಲ್ಬರ್ಟ ಐನ್‌ಸ್ಟಿನ್‌ರಂತಹ ಸುಪ್ರಸಿದ್ಧ ವಿಜ್ಞಾನಿಗಳು ಆ ಜಗನ್ನಿಯಾಮಕನ ಅಸ್ತಿತ್ವವನ್ನು ಅಲ್ಲಗಳೆಯಲಿಲ್ಲ ಎಂಬುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ ಈ ಕಾರಣದಿಂದಾಗಿಯೇ ದೇವರನ್ನು, ಆತನಿಂದ ನಿರ್ಮಿಸಲ್ಪಟ್ಟಿರುವ ಈ ಜಗತ್ತನ್ನು ಮತ್ತು ಇವೆರಡನ್ನೂ ಕುರಿತು ಯೋಚಿಸುತ್ತಿರುವ ತನ್ನನ್ನು ತಾನು ತಿಳಿದುಕೊಳ್ಳುವುದಕ್ಕಾಗಿ ಪ್ರಾಚೀನ ಕಾಲದ ಭಾರತೀಯ ದಾರ್ಶನಿಕರು ಪಟ್ಟಿರುವ ಪರಿಶ್ರಮವು ವ್ಯರ್ಥವಾಗಿಲ್ಲ ಎಂದು ಹೇಳಬೇಕಾಗುತ್ತದೆ. ಅಷ್ಟೆ ಏಕೆ ? ಪ್ರಾಚೀನ ಕಾಲದ ಭಾರತೀಯ ದಾರ್ಶನಿಕರು ರೂಪಿಸಿರುವ ಸಿದ್ಧಾಂತಗಳು ಅಂತಿಮವಾದ ವೈಜ್ಞಾನಿಕ ಸತ್ಯವನ್ನೇ ಹೊರಸೂಸುತ್ತಿವೆ, ಎಂಬುದನ್ನು ಇಂದಿನ ವೈಜ್ಞಾನಿಕ ಯುಗದಲ್ಲಿ ಬದುಕುತ್ತಿರುವ ನಾವು ತಿಳಿದುಕೊಳ್ಳಬೇಕಾಗಿದೆ.

ವೈವಿಧ್ಯತೆಗೆ ನಮ್ಮ ಭಾರತ ದೇಶದಲ್ಲಿ ಕೊರತೆ ಎಂಬುದು ಎಳ್ಳಷ್ಟೂ ಇಲ್ಲ. ಈ ದೇಶದಲ್ಲಿ ಎಲ್ಲ ಕ್ಷೇತ್ರಗಳಲ್ಲಿ ನಾವು ವಿವಿಧತೆಯನ್ನು ಕಾಣುತ್ತೇವೆ. ಇಲ್ಲಿರುವ ವೈವಿಧ್ಯತೆಯು ಕೇವಲ ಧರ್ಮ, ವೇಷ, ಭಾಷೆ ಆಚಾರ-ವಿಚಾರ ಮತ್ತು ಚರ್ಮದ ಬಣ್ಣಗಳಿಗಷ್ಟೇ ಸೀಮಿತವಾಗಿರದೇ ಸಿದ್ಧಾಂತಗಳ ವರೆಗೂ ವ್ಯಾಪಿಸಿರುವುದು ಬಲು ಆಶ್ಚರ್ಯಕರವಾದ ಸಂಗತಿಯಾಗಿದೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ, ಮುಂತಾದ ಹಲವಾರು ಸಿದ್ಧಾಂತಗಳು ಭಾರತದಲ್ಲಿ ರೂಪುಗೊಂಡಿವೆ. ಸಿದ್ಧಾಂತಗಳು ಮೂಲಭೂತ ವಿಷಯಗಳನ್ನು ಕುರಿತು ಅಂತಿಮ ನಿರ್ಣಯಗಳನ್ನು ಮಂಡಿಸಿ ಯಾವುದು ಸತ್ಯ ಎಂಬುದನ್ನು ಖಂಡಿತವಾಗಿ ಹೇಳುತ್ತವೆ. ಸಿದ್ಧಾಂತಗಳಲ್ಲಿಯೂ ಸಹಿತ ಈ ರೀತಿಯ ವೈವಿಧ್ಯತೆಯು ಕಂಡುಬಂದರೆ ನಾವು ಏಕರೂಪವಾದ ಸತ್ಯವನ್ನು ತಿಳಿದುಕೊಳ್ಳುವುದಾದರೂ ಹೇಗೆ ? ಒಟ್ಟಿನಲ್ಲಿ ಭಾರತೀಯರಾದ ನಾವುಗಳು ವೈವಿಧ್ಯತೆಯ ಜಾಲ

ದಲ್ಲಿ ಮತ್ತು ಸಿದ್ಧಾಂತಗಳ ಸುಳಿಯಲ್ಲಿ ಸಿಲುಕಿಕೊಂಡಿರುವುದಂತೂ ಸತ್ಯ ಸಂಗತಿಯಾಗಿದೆ.

ವಿವಿಧತೆಯಲ್ಲಿ ಏಕತೆಯನ್ನು ಕಂಡುಕೊಳ್ಳುವುದೇ ಭಾರತೀಯರ ವೈಶಿಷ್ಟ್ಯವಾಗಿದೆ. ಭಾರತೀಯರು ತಮ್ಮಲ್ಲಿ ರಕ್ತಗತವಾಗಿರುವ ಈ ಗುಣ ವಿಶೇಷತೆಯಿಂದಲೇ ವೈವಿಧ್ಯತೆ ಎಂಬ ವಾಸ್ತವಿಕತೆಯ ಮಧ್ಯದಲ್ಲಿಯೂ ಸಹಿತ ಏಕತೆ ಎಂಬ ಸತ್ಯವನ್ನು ಕಂಡು ಹಿಡಿದು ಸುಂದರವಾದ ಸಮಗ್ರ ಭಾರತವನ್ನು ಕಟ್ಟಿರುವರು. ಹಲವು ನಾಮಗಳಿಂದ ಕರೆಯಲ್ಪಡುವ ಆ ದೇವರು ಒಬ್ಬನೇ ಎಂಬುದನ್ನು ಭಾರತವು ಸಾರಿ ಹೇಳುತ್ತಿದೆ. "ಜಗತ್ತಿನ ಎಲ್ಲ ಧರ್ಮಗಳು ಅನೇಕ ಅಂಶಗಳಲ್ಲಿ ಭಿನ್ನವಾಗಿದ್ದರೂ ಸತ್ಯವೊಂದನ್ನು ಬಿಟ್ಟು ಇನ್ನಾವುದೂ ಜಗತ್ತಿನಲ್ಲಿ ಇಲ್ಲ ಎಂಬ ಮಾತನ್ನು ಒಂದಾಗಿ ಸಾರುತ್ತವೆ" ಎಂಬುದಾಗಿ ಜಗತ್ತಿನ ಎಲ್ಲ ಧರ್ಮಗಳ ಮೂಲ ತತ್ತ್ವಗಳನ್ನು ಆಳವಾಗಿ ಅಭ್ಯಾಸ ಮಾಡಿದ ಮಹಾತ್ಮಾ ಗಾಂಧೀಜಿಯವರು ಹೇಳಿರುವರು. ಧರ್ಮಗಳು ಹಲವಿದ್ದರೂ ಸಹಿತ ಮಾನವ ಧರ್ಮವು ಒಂದೇ ಎಂಬುದಕ್ಕೆ ಭಾರತವು ಸಾಕ್ಷಿಯಾಗಿದೆ. ಅದೇ ರೀತಿಯಾಗಿ ಸತ್ಯವನ್ನು ಸೂಚಿಸುವ ಸಿದ್ಧಾಂತಗಳು ಹಲವಿದ್ದರೂ ಸಹಿತ ಆ ಸತ್ಯವು ಒಂದೇ ಎಂಬುದನ್ನು ನಾವು ಮರೆಯಬಾರದು. ಆ ಏಕರೂಪವಾದ ಸತ್ಯವನ್ನು ಕಂಡುಕೊಳ್ಳುವ ಉದ್ದೇಶದಿಂದ ನಾವು ಎಲ್ಲ ಸಿದ್ಧಾಂತಗಳನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡಿದಾಗ ಶಿವಾದ್ವೈತ ಸಿದ್ಧಾಂತ ಅಥವಾ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತಗಳು ವಿಶೇಷವಾದ ರೀತಿಯಲ್ಲಿ ನಮ್ಮ ಗಮನವನ್ನು ತಮ್ಮೆಡೆಗೆ ಸೆಳೆದುಕೊಳ್ಳುತ್ತವೆ.

ದ್ವೈತ ಮತ್ತು ಅದ್ವೈತ ಸಿದ್ಧಾಂತಗಳು ಪರಸ್ಪರ ವಿರುದ್ಧ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತವೆ. ಜೀವ ಮತ್ತು ದೇವರು ಭಿನ್ನ ಭಿನ್ನವಾಗಿವೆ ಎಂದು ದ್ವೈತ ಸಿದ್ಧಾಂತ ಹೇಳಿದರೆ, ಜೀವ ಮತ್ತು ದೇವರುಗಳ ಮಧ್ಯ ಭಿನ್ನತೆಯೇ ಇಲ್ಲ ಎಂಬುದಾಗಿ ಅದ್ವೈತ ಸಿದ್ಧಾಂತವು ಹೇಳುತ್ತದೆ. ದ್ವೈತ ಸಿದ್ಧಾಂತ ಹೇಳುತ್ತಿರುವುದೂ ಸುಳ್ಳಲ್ಲ; ಅದ್ವೈತ ಸಿದ್ಧಾಂತ ಹೇಳುತ್ತಿರುವುದೂ ಸುಳ್ಳಲ್ಲ. ಆದರೆ ಪರಸ್ಪರ ವಿರುದ್ಧಾರ್ಥವನ್ನು ಹೊರ

ಸೂಸುತ್ತಿರುವ ಇವೆರಡರಲ್ಲಿ ಯಾವುದು ಸತ್ಯ ಎಂಬ ಪ್ರಶ್ನೆಯು ಸಹಜವಾಗಿ ಉದ್ಭವಿಸುತ್ತದೆ. ದ್ವೈತ ಮತ್ತು ಅದ್ವೈತ ಸಿದ್ಧಾಂತಗಳು ಸತ್ಯದ ಒಂದೊಂದು ಮುಖಗಳಾಗಿ ಕಂಡು ಬರುತ್ತವೆ. ಇವೆರಡರಲ್ಲಿ ಯಾವ ಒಂದು ಸಿದ್ಧಾಂತವೂ ಸಂಪೂರ್ಣ ಸತ್ಯವನ್ನು ಹೊರಸೂಸುವದಿಲ್ಲ ಎಂಬುದು ಸಹಜವಾಗಿ ಕಂಡು ಬರುತ್ತದೆ. ಅದ್ವೈತ ಸಿದ್ಧಾಂತವು ದ್ವೈತ ಸಿದ್ಧಾಂತಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಸಾಕ್ಷಿ ಆಧಾರಗಳ ಸಹಿತವಾಗಿ ಮಂಡಿಸಿ ದ್ವೈತ ಸಿದ್ಧಾಂತದ ಅರ್ಥವ್ಯಾಪ್ತಿಯನ್ನು ಸೀಮಿತಗೊಳಿಸುತ್ತದೆ. ಇನ್ನು ಅದ್ವೈತ ಸಿದ್ಧಾಂತವೇ ಅಂತಿಮ ಸತ್ಯವೆಂದು ತಿಳಿದು ಅದನ್ನು ಎಲ್ಲೆಡೆಯೂ ಬಳಸು-ವಂತಿಲ್ಲ ಮತ್ತು ಅದರ ಬಳಕೆಯು ಸುಸಂಬದ್ಧವಾಗಿ ಕಂಡು ಬರುವದಿಲ್ಲ ಎಂಬ ಸಂಗತಿಯು ನಮಗೆ ಯೋಗಿಗಳ ಮತ್ತು ಅನುಭಾವಿಗಳ ಅನುಭವ ವಾಣಿ-ಗಳಿಂದ ತಿಳಿಯುತ್ತದೆ. "ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ" ಎಂಬುದಾಗಿ ಶ್ರೀ ಅಲ್ಲಮ ಪ್ರಭುಗಳು ನುಡಿದರೆ "ಬಳಸದಿರದ್ವೈತವನು ಬಾಹ್ಯದಲಿ. ನಿನ್ನೊಳಗೇಕೋಭಾವನೆಯೊಡಗೂಡು" ಎಂಬುದಾಗಿ ಶ್ರೀಮನ್ ನಿಜಗುಣ ಶಿವಯೋಗಿಗಳು ನುಡಿದಿರುವರು. ಈ ರೀತಿಯ ತುಲನಾತ್ಮಕ ದೃಷ್ಟಿಕೋನವನ್ನಿರಿಸಿಕೊಂಡು ನಾವು ಶಿವಾದ್ವೈತ ಸಿದ್ಧಾಂತವನ್ನು ಪರೀಕ್ಷಿಸಿದರೆ ಆ ಸಿದ್ಧಾಂತವು ಸರ್ವಕಾಲಿಕವಾದ ಸಂಪೂರ್ಣ ಸತ್ಯವನ್ನು ಹೊರಸೂಸುತ್ತಿರುವುದು ನಮಗೆ ಕಂಡು ಬರುತ್ತದೆ. ಶಿವಾದ್ವೈತ ಸಿದ್ಧಾಂತವು ದ್ವೈತವೂ ಅಲ್ಲ,ಅದ್ವೈತವೂ ಅಲ್ಲ.ದ್ವೈತ ಮತ್ತು ಅದ್ವೈತ ಸಿದ್ಧಾಂತಗಳು ಎಷ್ಟರ ಮಟ್ಟಿಗೆ ಸತ್ಯವಾಗಿವೆಯೋ ಅಷ್ಟರ ಮಟ್ಟಿಗೆ ಅವೆರಡೂ ಈ ಶಿವಾದ್ವೈತ ಸಿದ್ಧಾಂತದಲ್ಲಿ ಗೋಚರಿಸುತ್ತವೆ ಕೊನೆಯಲ್ಲಿ ದ್ವೈತ ಮತ್ತು ಅದ್ವೈತ ಸಿದ್ಧಾಂತಗಳ ನಿಲುವುಗಳಿಗೆ ಹೊರತಾದ ತನ್ನದೇ ಆದ ಹೊಸದೊಂದು ನಿಲುವನ್ನು ಶಿವಾದ್ವೈತ ಸಿದ್ಧಾಂತವು ಪ್ರತಿಪಾದಿಸುತ್ತದೆ. ಶಿವಾದ್ವೈತ ಸಿದ್ಧಾಂತವು ಲಿಂಗಾಂಗ ಸಾಮರಸ್ಯದ ಸಂಪಾದನೆಯನ್ನು ತನ್ನ ಅಂತಿಮ ಗುರಿಯನ್ನಾಗಿ ಇರಿಸಿಕೊಳ್ಳುತ್ತದೆ. ಶಿವಾದ್ವೈತ ಸಿದ್ಧಾಂತವನ್ನು ಆಧಾರವಾಗಿರಿಸಿಕೊಂಡು ರೂಪುಗೊಂಡಿರುವ ಶಿವಯೋಗವು ಸರ್ವಶ್ರೇಷ್ಠವಾದ ಯೋಗ ಎನಿಸಿಕೊಂಡಿರುವುದು.

ಶಿವನು ಶಕ್ತಿಯಿಂದ ಕೂಡಿಕೊಂಡಿರುತ್ತಾನೆ. ಆದ್ದರಿಂದ ಶಿವನನ್ನು "ಶಕ್ತಿ ವಿಶಿಷ್ಟ" ಎಂಬುದಾಗಿ ಕರೆಯುವರು. ಈ ಕಾರಣದಿಂದಾಗಿಯೇ ಶಿವಾದ್ವೈತ ಸಿದ್ಧಾಂತಕ್ಕೆ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ ಎಂಬ ಇನ್ನೊಂದು ಹೆಸರು ಇರುತ್ತದೆ. ಅಂತಿಮವಾಗಿ ಒಂದೇ ಗುರಿಯನ್ನು ತಲುಪುವ ಈ ಎರಡೂ ಸಿದ್ಧಾಂತಗಳು ಅನುಸರಿಸುವ ರೀತಿ ಮಾತ್ರ ಬೇರೆ ಬೇರೆಯಾಗಿದೆ. ಕೆಲವರು "ಶಕ್ತಿ ವಿಶಿಷ್ಟವಾದ ಶಿವಾದ್ವೈತ" ಎಂಬ ಪದ ಪ್ರಯೋಗ ಮಾಡಿ ಎರಡೂ ಸಿದ್ಧಾಂತಗಳನ್ನು ಒಂದೇ ಹೆಸರಿನಿಂದ ಕರೆಯುವರು. ಇನ್ನು ಮುಂದೆ ಶಿವಾದ್ವೈತ ಮತ್ತು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತಗಳಲ್ಲಿ ಜೀವ, ಜಗತ್ತು ಮತ್ತು ದೇವರನ್ನು ಕುರಿತು ಏನು ಹೇಳಲ್ಪಟ್ಟಿರುವುದು ಎಂಬುದನ್ನು ನೋಡೋಣ.

ಬ್ರಹ್ಮಾಂಡದ ವ್ಯಾಪ್ತಿ ಅನಂತ, ಊಹಾತೀತ. ಇದರಲ್ಲಿ ಸೌರ ಮಂಡಲಗಳು, ಕ್ಷೀರ ಪಥಗಳು, ನಕ್ಷತ್ರಗಳು ಮೊದಲಾದವು ಎಣಿಸಲಾಗದಷ್ಟಿವೆ. ವಿಶಾಲವಾದ ಮರವು ತಾನು ಹುಟ್ಟುವುದಕ್ಕಿಂತ ಪೂರ್ವದಲ್ಲಿ ಚಿಕ್ಕದಾದ ತನ್ನ ಬೀಜದ ರೂಪದಲ್ಲಿ ಇರುತ್ತದೆ. ಅದೇ ರೀತಿಯಾಗಿ ಅನಂತವಾದ ಈ ಬ್ರಹ್ಮಾಂಡವು ( ಜಗತ್ತು ಅಥವಾ ವಿಶ್ವವು) ತಾನು ಪ್ರಕಟಗೊಳ್ಳುವುದಕ್ಕಿಂತ ಪೂರ್ವದಲ್ಲಿ ಸ್ವಯಂಭುವಿನ ರೂಪದಲ್ಲಿ ಅವ್ಯಕ್ತವಾಗಿ ಶೂನ್ಯ ಸ್ಥಿತಿಯಲ್ಲಿ ಇತ್ತು. ಸ್ವಯಂಭುವಿನ ರೂಪದಲ್ಲಿದ್ದ ಆ ಪರಶಿವನು ತನ್ನ ಲೀಲಾ ವಿನೋದಕ್ಕಾಗಿ ತಾನೇ ಈ ವಿಶ್ವರೂಪದಲ್ಲಿ ಪ್ರಕಟಗೊಂಡಿರುವನು. ಶಿವನು ಶೂನ್ಯವಾಚಕನಾಗಿದ್ದಾನೆ. ಹಾಗೆಯೇ ಶಕ್ತಿಯು ಜ್ಞಾನವಾಚಕವಾಗಿದೆ. ಶಿವ–ಶಕ್ತಿಯರ ಮಧ್ಯದಲ್ಲಿ ಅಂದರೆ ಶಿವನ ಸಂಕಲ್ಪ ಶಕ್ತಿಯ ಮುಖಾಂತರವಾಗಿ ರೂಪುಗೊಂಡಿರುವ ಈ ಜಗತ್ತು ಶಿವನಿಂದನ್ಯವಲ್ಲ.

ಶಿವ ಮತ್ತು ಜಗತ್ತು ಇವುಗಳ ನಡುವಿನ ಸಂಬಂಧವು ಜೇಡರ ಹುಳು ಮತ್ತು ಜೇಡರ ಬಲೆ ಇವುಗಳ ನಡುವಿನ ಸಂಬಂಧವನ್ನು ಹೋಲುತ್ತದೆ. ಜೇಡರ ಹುಳುವು ತನ್ನಿಂದಲೇ ನಿರ್ಮಿಸಲ್ಪಟ್ಟ ಜೇಡರ ಬಲೆಗೆ ನಿಮಿತ್ತ ಕಾರಣವಾಗಿರುತ್ತದೆ. ಅದೇ ರೀತಿ ಶಿವತತ್ತ್ವಾತ್ಮಕವಾದ ಪರಶಿವ ಬ್ರಹ್ಮವು

ಈ ಜಗತ್ತಿನ ನಿರ್ಮಾಣಕ್ಕೆ ನಿಮಿತ್ತಕಾರಣವಾಗಿರುತ್ತದೆ. ಇನ್ನು ಅದೇ ಜೇಡರ ಹುಳುವು ತನ್ನಿಂದಲೇ ನಿರ್ಮಿಸಲ್ಪಟ್ಟ ಜೇಡರ ಬಲೆಗೆ ಉಪಾದಾನ ಕಾರಣವೂ ಆಗಿರುತ್ತದೆ. ಅದೇ ರೀತಿಯಾಗಿ ಶಕ್ತಿತತ್ತ್ವಾತ್ಮಕವಾದ ಪರಶಿವ ಬ್ರಹ್ಮವು ಈ ಜಗತ್ತಿಗೆ ಉಪಾದಾನ ಕಾರಣವೂ ಆಗಿರುತ್ತದೆ. ಈ ರೀತಿಯಾಗಿ ಪರಶಿವಬ್ರಹ್ಮವೇ ಈ ಜಗತ್ತಿಗೆ ಅಭಿನ್ನ ನಿಮಿತ್ತೋಪಾದಾನ ಕಾರಣವಾಗಿರುತ್ತದೆ. (Doctrine of Inseperability of efficient and Material cause) ಅಂದರೆ ಆ ಪರಶಿವನೇ ಈ ಜಗತ್ತನ್ನು ನಿರ್ಮಿಸಿದನು ಮತ್ತು ಅವನೇ ಸ್ವತಃ ಈ ವಿಶ್ವರೂಪವನ್ನು ತಳೆದಿರುವನು. ಆದ್ದರಿಂದ ಈ ಜಗತ್ತು ಅಥವಾ ಈ ವಿಶ್ವವು ಪರಶಿವ ಬ್ರಹ್ಮನ ಪ್ರತ್ಯಕ್ಷ ರೂಪವಾಗಿರುವುದು. ಶಿವಶಕ್ತಿಯರಂತೆಯೇ ಈ ಜಗತ್ತು ಸಹಿತ ಸತ್ಯವಾಗಿರುವುದು ಮತ್ತು ಇದು ಶಿವನ ಲೀಲೆಯನ್ನು ಸ್ಪುಟಗೊಳಿಸುವುದು.

ಈ ಜಗತ್ತು ( ಬ್ರಹ್ಮಾಂಡ ಅಥವಾ ವಿಶ್ವ) ಅನಂತವಾಗಿದ್ದರೂ ಸಹಿತ ಇದರ ರಚನೆಗೆ ಕಾರಣವಾಗಿರುವ ಮೂಲಭೂತ ತತ್ತ್ವಗಳು ಕೇವಲ ಮೂವತ್ತಾರು ಎಂಬುದಾಗಿ ಶಿವಾಗಮಗಳು ಹೇಳುತ್ತವೆ. ಜಗತ್ತಿನ ರಚನೆಯು ಶಿವತತ್ತ್ವದಿಂದಲೇ ಪ್ರಾರಂಭವಾಯಿತು. ಶಿವತತ್ತ್ವದಿಂದ ಶಕ್ತಿ ತತ್ತ್ವ, ಶಕ್ತಿ ತತ್ತ್ವದಿಂದ ಸದಾಶಿವ ತತ್ತ್ವ, ಸದಾಶಿವ ತತ್ತ್ವದಿಂದ ಈಶ್ವರ ತತ್ತ್ವ, ಹೀಗೆ ಮುಂದುವರೆದು ಒಟ್ಟು ಮೂವತ್ತಾರು ತತ್ತ್ವಗಳು ಉತ್ಪತ್ತಿಯಾದವು. ಈ ಮೂವತ್ತಾರು ತತ್ತ್ವಗಳಲ್ಲಿ ಶಿವ, ಶಕ್ತಿ, ಸದಾಶಿವ, ಈಶ್ವರ, ಮತ್ತು ಶುದ್ಧವಿದ್ಯಾ ಎಂಬ ಐದು ಶುದ್ಧ ತತ್ತ್ವಗಳು, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ ಮತ್ತು ಪುರುಷ ಎಂಬ ಏಳು ಶುದ್ಧಾಶುದ್ಧ ತತ್ತ್ವಗಳು ಮತ್ತು ಇನ್ನುಳಿದ ಇಪ್ಪತ್ನಾಲ್ಕು ಅಶುದ್ಧ ತತ್ತ್ವಗಳು ಇರುತ್ತವೆ ಅಶುದ್ಧ ತತ್ತ್ವಗಳಲ್ಲಿ ಪ್ರಮುಖವಾಗಿರುವ ಪ್ರಕೃತಿ ತತ್ತ್ವವು ಸುಖ, ದುಃಖ ಮತ್ತು ಮೋಹಗಳಿಗೆ ಕಾರಣಗಳಾದ ಸತ್ವ, ರಜೋ ಮತ್ತು ತಮೋ ಗುಣಗಳ ಸಾಮಾನ್ಯ ಅವಸ್ಥಾರೂಪವಾಗಿರುವದು. ಈ ಪ್ರಕೃತಿ ತತ್ತ್ವವೇ ಮೂರು ಅಂತ:ಕರಣ ತತ್ತ್ವಗಳಿಗೂ, ಐದು ಜ್ಞಾನೇಂದ್ರಿಯಗಳಿಗೂ, ಐದು ಕರ್ಮೇಂದ್ರಿಯಗಳಿಗೂ, ಐದು ತನ್ಮಾತ್ರ

ಗಳಿಗೂ, ಮತ್ತು ಪಂಚ ಮಹಾಭೂತಗಳಿಗೂ ಮೂಲ ಕಾರಣವಾಗಿರುವದು. ಬುದ್ಧಿ, ಮನಸ್ಸು, ಮತ್ತು ಅಹಂಕಾರ ಇವು ಮೂರು ಅಂತಃಕರಣ ತತ್ತ್ವಗಳು. ಶ್ರೋತ್ರ (ಕಿವಿ), ತ್ವಕ್ (ಚರ್ಮ), ನೇತ್ರ (ಕಣ್ಣು) ಜಿಹ್ವಾ (ನಾಲಿಗೆ), ಮತ್ತು ಘ್ರಾಣ (ಮೂಗು) ಇವು ಐದು ಜ್ಞಾನೇಂದ್ರಿಯಗಳು. ವಾಕ್ (ವಾಣಿ), ಪಾಣಿ (ಕೈ), ಪಾದ (ಕಾಲು), ಪಾಯು (ಗುಹ್ಯ) ಮತ್ತು ಉಪಸ್ಥ (ಗುದ) ಇವು ಐದು ಕರ್ಮೇಂದ್ರಿಯಗಳು. ಶಬ್ದ, ಸ್ಪರ್ಶ ರೂಪ, ರಸ, ಮತ್ತು ಗಂಧ ಇವು ಐದು ತನ್ಮಾತ್ರಗಳು. ಆಕಾಶ (ಬಯಲು) ವಾಯು (ಗಾಳಿ), ಅಗ್ನಿ (ಬೆಂಕಿ), ಜಲ (ನೀರು), ಮತ್ತು ಪೃಥ್ವಿ (ಭೂಮಿ), ಇವು ಪಂಚ ಮಹಾಭೂತಗಳು. ಈ ಮೂವತ್ತಾರು ತತ್ತ್ವಗಳ ಸಮೂಹವೇ ಈ ಜಗತ್ತು (ಅಥವಾ ವಿಶ್ವ) ಆಗಿರುವುದು. ಇದು ಶಿವಾದ್ವೈತ ಸಿದ್ಧಾಂತದಲ್ಲಿ ಹೇಳಲ್ಪಡುವ ಜಗತ್ತಿನ ಸ್ವರೂಪ ವಿವರಣೆಯಾಗಿರುವುದು.

ಮೂಲತ : ಜೀವ ಮತ್ತು ಶಿವ ಇವರುಗಳು ಬೇರೆ ಬೇರೆಯಾಗಿ ಇರದೇ ಒಂದು ಇನ್ನೊಂದರ ಅಂಗವಾಗಿದೆ ಮತ್ತು ಒಂದರಿಂದ ಇನ್ನೊಂದು ಹುಟ್ಟದೆ ಎಂಬುದಾಗಿ ಶಿವಾದ್ವೈತ ಸಿದ್ಧಾಂತವು ಪ್ರತಿಪಾದಿಸುತ್ತದೆ. ವಾಸ್ತವಿಕವಾಗಿ ಮಾನವ ಜೀವಿಯು ಈ ಜಗತ್ತಿನಲ್ಲಿಯೇ ಅತ್ಯಂತ ಶ್ರೇಷ್ಠ ಮಟ್ಟದ ಜೀವಿ ಎನಿಸಿಕೊಂಡಿರುತ್ತದೆ. ಆದರೂ ಸಹಿತ ಜೀವ ಮತ್ತು ಶಿವ ಇವರುಗಳ ನಡುವೆ ಯಾವುದೋ ಒಂದು ಭಿನ್ನತೆ ಇರುವುದೇನೋ ಎಂಬುದಾಗಿ ಕೆಲವು ಸಲ ಅನಿಸದೇ ಇರಲಾರದು. ಜೀವನು ದೇಹವನ್ನು ಧರಿಸಿ ಈ ಸಂಸಾರದಲ್ಲಿ ಹುಟ್ಟಿ ಬಂದಿರುವುದರಿಂದ ಲಿಂಗದ ( ವಿಶ್ವದ ) ಒಂದು ಅಂಗವಾಗಿ ಗೋಚರಿಸುತ್ತಾನೆ. ಶಿವನಿಗಿಂತ ಭಿನ್ನವಾಗಿ ಇರುವಂತೆ ಕಾಣಿಸುತ್ತಾನೆ. ಈ ಭಿನ್ನತೆಯೇ "ಶಿವ ಬೇರೆ, ಜೀವ ಬೇರೆ" ಎಂಬ ದ್ವೈತ ಭಾವನೆಗೆ ಅವಕಾಶ ಮಾಡಿಕೊಡುತ್ತದೆ. ಈ ಭಿನ್ನತೆಯು ಕಾರಣದಿಂದಾಗಿಯೇ ಶಿವನು ಉಪಾಸ್ಯನಾಗಿಯೂ ಮತ್ತು ಜೀವನು ಉಪಾಸಕನಾಗಿಯೂ ಕಂಡು ಬರುತ್ತಾರೆ. ಉಪಾಸ್ಯ ಮತ್ತು ಉಪಾಸಕ ಎನ್ನುವಷ್ಟರ ಮಟ್ಟಿಗಿನ ದ್ವೈತ ಭಾವನೆಗೆ ಅಥವಾ ಭಿನ್ನತೆಗೆ

ಈ ಶಿವಾದ್ವೈತ ಸಿದ್ಧಾಂತವಲ್ಲಿಯೂ ಸಹ ಆಸ್ಪದವುಂಟು. ಶಿವಾದ್ವೈತ ಸಿದ್ಧಾಂತವು ಶಿವ ಮತ್ತು ಜೀವ ಇವರುಗಳ ನಡುವಿನ ಭಿನ್ನತೆಗೆ ಕಾರಣವನ್ನೂ ಸಹಿತ ನೀಡುತ್ತದೆ. ಜೀವ ಮತ್ತು ಶಿವ ಇವರೀರ್ವರಲ್ಲಿ ಈ ರೀತಿಯ ಭಿನ್ನತೆ ಅಥವಾ ವ್ಯತ್ಯಾಸವು ಕಂಡು ಬರುವುದಕ್ಕೆ ಮೂವತ್ತಾರು ತತ್ತ್ವಗಳಲ್ಲಿ ಹೇಳಲ್ಪಟ್ಟಿರುವ ಮಾಯಾ ತತ್ತ್ವ ಹಾಗೂ ಕಾಲ, ನಿಯತಿ, ರಾಗ, ವಿದ್ಯಾ ಮತ್ತು ಕಲಾ ಎಂಬ ಪಂಚಕಂಚುಗಳೇ ಕಾರಣವಾಗಿವೆ. ಇಷ್ಟೇ ಅಲ್ಲದೇ ಜೀವನು ಆಣವ ಮಲ, ಮಾಯಾ ಮಲ ಮತ್ತು ಕರ್ಮ ಮಲ ಎಂಬ ಮಲತ್ರಯಗಳಿಂದಲೂ ಆವರಿಸಲ್ಪಟ್ಟಿರುವನು. ಈ ಮಲತ್ರಯ ಮತ್ತು ಪಂಚ ಕಂಚುಕಗಳಿಂದಾಗಿಯೇ ಜೀವನು ತನ್ನ ಸ್ವಸ್ವರೂಪವನ್ನು ಮರೆತು ಬಿಟ್ಟಿರುವನು "ಮರೆತರೆ ಮಾನವ ಅರಿತರೆ ಶರಣ" ಎಂಬ ಮಾತಿನಂತೆ ಜೀವಿಯು ತನ್ನ ಸ್ವಸ್ವರೂಪವನ್ನು ಮರೆತು ಈ ಸಂಸಾರದಲ್ಲಿ ಮಾನವನಾಗಿ ಗೋಚರಿಸುವನು. ಇದು ಶಿವಾದ್ವೈತ ಸಿದ್ಧಾಂತದಲ್ಲಿ ಹೇಳಲ್ಪಟ್ಟಿರುವ ಜೀವಿಯ ಸ್ವರೂಪ ವಿವರಣೆಯಾಗಿರುವದು. ಆದರೆ ಶಿವಾದ್ವೈತ ಸಿದ್ಧಾಂತದ ಪ್ರಕಾರವೇ ಶಿವ ಮತ್ತು ಜೀವ ಇವರುಗಳ ನಡುವಿನ ಈ ಭಿನ್ನತೆಯು ಶಾಶ್ವತವಾಗಿ ಉಳಿದುಕೊಂಡು ಬರುವ ಭಿನ್ನತೆಯಲ್ಲ. ಇದು ಕೆಲವೇ ಅವಧಿಯ ವರೆಗೆ ಮಾತ್ರ ಇರುತ್ತದೆ.

ಮೂಲತ: ಶಿವತ್ತತ್ವದಿಂದಲೇ ಹೊರಹೊಮ್ಮಿ ಬಂದಿರುವುದರಿಂದ ಜೀವನು ಮರಳಿ ಆ ಶಿವನ ಸತ್ಯ ಸ್ವರೂಪವನ್ನು ತಿಳಿದುಕೊಳ್ಳಲು ತವಕಪಡುತ್ತಾನೆ. ಯಾವುದೇ ಭೌತಿಕ ಸ್ಥಾನ ಮಾನಗಳಿಂದ ಅಥವಾ ಭೌತಿಕ ಸಂಪತ್ತಿನಿಂದ ಜೀವನಿಗೆ ನಿಜವಾದ ಶಾಂತಿಯು ಲಭಿಸುವದಿಲ್ಲ, ಏಕೆಂದರೆ ಅವುಗಳಿಂದ ದೊರೆಯುವ ಸುಖವು ತಾತ್ಕಾಲಿಕವಾಗಿರುತ್ತದೆ. ಶಿವಸ್ಮರಣೆಯಿಂದ ದೂರವಾಗಿರುವ ಜೀವಿಗೆ ನಿಜವಾದ ಸುಖ ಶಾಂತಿಗಳು ಲಭಿಸಬೇಕಾದರೆ ಆತನು ಮರಳಿ ಶಿವಧ್ಯಾನಾಸಕ್ತನಾಗಿ ಶಿವ ಸನಿಧಿಯನ್ನು ಸಂಪಾದಿಸಬೇಕಾಗುತ್ತದೆ. ಜೀವನು ಸತ್ಯವಂತನಾಗಿ ನಡೆದುಕೊಂಡು ಶಿವಮಯವಾಗಿರುವ ಸತ್ಯಲೋಕಕ್ಕೆ ಆಗಮಿಸಿದಾಗಲೇ ಆತನಿಗೆ ಚಿರ ಶಾಂತಿಯು ಲಭಿಸುತ್ತದೆ. ಶಿವಾದ್ವೈತ ಸಿದ್ಧಾಂತವನ್ನು ಪಾಲಿಸುವ ಜೀವನು ಷಟ್‌ಸ್ಥಲ ಮಾರ್ಗದಲ್ಲಿ ಕ್ರಮಿಸುತ್ತಾನೆ. ಈ ಮಾರ್ಗದಲ್ಲಿ ಕ್ರಮಿಸಿದಾಗಲೇ ಆತನು ಮಲತ್ರಯ ಮತ್ತು ಪಂಚಕಂಚುಕಗಳನ್ನು

ಹೋಗಲಾಡಿಸಿಕೊಂಡು ತನ್ನ ಸ್ವಸ್ವರೂಪ ಜ್ಞಾನವನ್ನು ಸಂಪಾದಿಸಿಕೊಳ್ಳಲು ಶಕ್ತನಾಗುತ್ತಾನೆ. ಹಿಂದಿನಿಂದ ಬಂದಿರುವ ಒಳ್ಳೆಯ ಸಂಸ್ಕಾರಗಳ ಪ್ರಭಲತೆ ಮತ್ತು ಶಿವಜ್ಞಾನ ಸಂಗ್ರಹ ಇವುಗಳಿಂದ ಆತನಲ್ಲಿ ಶಿವನ ಮೇಲೆ ಶ್ರದ್ಧಾ ಭಕ್ತಿ ಮೂಡಿದಾಗ ಆತನು ಭಕ್ತಸ್ಥಲ ತಲುಪುತ್ತಾನೆ. ಈ ಷಟ್‌ಸ್ಥಲ ಮಾರ್ಗದಲ್ಲಿ ಕ್ರಮಿಸುವಾಗ ಆತನ ಭಕ್ತಿ, ಜ್ಞಾನ ಮತ್ತು ಕ್ರಿಯಾಶೀಲತೆ ಇವುಗಳು ಸೂಕ್ತವಾದ ಪ್ರಮಾಣದಲ್ಲಿ ಹೆಚ್ಚುತ್ತಾ ಹೋಗುತ್ತವೆ. ಆತನಲ್ಲಿ ನಿಷ್ಠಾ ಭಕ್ತಿ ಒಡಮೂಡಿದಾಗ ಆತನು ಮಹೇಶ್ವರ ಸ್ಥಲ ತಲುಪುತ್ತಾನೆ. ಈ ರೀತಿಯಾಗಿ ಧರ್ಮ ಮಾರ್ಗದಲ್ಲಿ ಕ್ರಮಿಸುತ್ತಿರುವ ಆತನಿಗೆ ತಾನು ಬಳಸುತ್ತಿರುವ ಪ್ರತಿಯೊಂದು ವಸ್ತುವು ಶಿವಮಯವಾಗಿ ಕಾಣಲಾರಂಭಿಸುತ್ತದೆ. ಆತನು ತನ್ನ ಅಂತರಂಗದಲ್ಲಿಯೂ ಹಾಗೂ ಬಹಿರಂಗದಲ್ಲಿಯೂ ಶಿವನನ್ನೇ ಕಾಣುತ್ತಾನೆ. ಆತನಿಗೆ ಇಡೀ ಬ್ರಹ್ಮಾಂಡವೇ ಶಿವಮಯವಾಗಿ ಕಾಣಿಸುತ್ತದೆ. ತನ್ನ ಕೈಸೇರುವ ಪ್ರತಿಯೊಂದು ವಸ್ತುವನ್ನು ಆತನು ಶಿವಪ್ರಸಾದವೆಂಬ ಭಾವನೆಯಿಂದ ಸ್ವೀಕರಿಸುತ್ತಾನೆ. ತನ್ನ ಪಾಲಿಗೆ ಒದಗಿ ಬಂದಿರುವ ತನ್ನ ಇಡೀ ಜೀವನವನ್ನೇ ಆತನು ಒಂದು ಶಿವಪ್ರಸಾದದ ರೂಪದಲ್ಲಿ ಸ್ವೀಕರಿಸುತ್ತಾನೆ. ಆಗ ಆತನು ಪ್ರಸಾದಿ ಸ್ಥಲವನ್ನು ತಲುಪಿರುತ್ತಾನೆ. ಈ ರೀತಿಯಾಗಿ ಪ್ರಸಾದಿ ಸ್ಥಲದಲ್ಲಿ ಆತನಿಗೆ ಇಡೀ ಬ್ರಹ್ಮಾಂಡವೇ ಶಿವಮಯವಾಗಿ ಗೋಚರಿಸಿದರೂ ಸಹಿತ ಆತನು "ನಾನೇ ಬ್ರಹ್ಮ" (ಅಹಂ ಬ್ರಹ್ಮಾಸ್ಮಿ) ಎಂಬ ಅದ್ವೈತದ ನಿಲುವನ್ನು ತಾಳುವುದಿಲ್ಲ. "ನಾನೇ ಬ್ರಹ್ಮ" ಎಂದು ಹೇಳಿಕೊಳ್ಳುವ ಅದ್ವೈತ ನಿಲುವಿಗೂ ಮತ್ತು ಈ ಶಿವಾದ್ವೈತದ ಅಂತಿಮ ನಿಲುವಿಗೂ ಬಹಳಷ್ಟು ವ್ಯತ್ಯಾಸವಿರುವುದನ್ನು ನಾವಿಲ್ಲಿ ಗಮನಿಸಬೇಕು. ಈ ವ್ಯತ್ಯಾಸವನ್ನು ಗಮನದಲ್ಲಿರಿಸಿಕೊಂಡೇ ಅದ್ವೈತ ಹಾಗೂ ಶಿವಾದ್ವೈತ ಸಿದ್ಧಾಂತಗಳೆರಡನ್ನೂ ಬಲ್ಲ ಶ್ರೀಮನ್ ನಿಜಗುಣ ಶಿವಯೋಗಿಗಳು "ಬಳಸದಿರದ್ವೈತವನು ಬಾಹ್ಯದಲಿ, ನಿನ್ನೊಳಗೇ ಕೋಭಾವನೆಯೊಡಗೂಡು" ಎಂಬುದಾಗಿ ಅನುಭಾವ ಪೂರ್ವಕವಾದ ಹಿತೋಪದೇಶವನ್ನು ಮಾಡಿರುವರು. ಜಗತ್ತಿನ ತುಂಬೆಲ್ಲಾ ಶಿವನ ಇರುವನ್ನು ಕಂಡುಕೊಂಡ ಜೀವನು ಅಂತರ್ಮುಖಿಯಾಗಿ ತನ್ನೊಳಗೇ ತಾನು ಬೆರೆತಾಗ ಷಟ್‌ಸ್ಥಲಗಳಲ್ಲಿ ಹೇಳಲ್ಪಡುವ ಪ್ರಾಣಲಿಂಗೀ ಸ್ಥಲವನ್ನು ತಲುಪುತ್ತಾನೆ. ಆತನ ಪ್ರಾಣವೇ ಲಿಂಗಮಯವಾಗುತ್ತದೆ. ಮುಂದೆ ಆತನ ಶರೀರವು

ಅಂಗಗುಣಗಳನ್ನಳಿದು ಲಿಂಗಗುಣಗಳನ್ನು ಸಂಪಾದಿಸಿದಾಗ ಆತನ ಪ್ರತಿಯೊಂದು ನಡೆ ನುಡಿಗಳು ಶರಣರ ಲಕ್ಷಣಗಳನ್ನು ಹೊರಸೂಸುತ್ತವೆ. ಆಗ ಆತನು ಶರಣ ಸ್ಥಲವನ್ನು ತಲುಪುತ್ತಾನೆ. ಅಂತಿಮವಾಗಿ ಆತನು ಲಿಂಗಾಂಗ ಸಾಮರಸ್ಯವನ್ನು ಸಂಪಾದಿಸಿದಾಗ ಐಕ್ಯಸ್ಥಲವನ್ನು ತಲುಪುತ್ತಾನೆ. ಈ ರೀತಿಯಾಗಿ ಅಲ್ಪಜ್ಞನಾಗಿರುವ ಜೀವನು ಶಿವಯೋಗ ಸಾಧನೆಯಿಂದ ಮಲತ್ರಯ ಮತ್ತು ಪಂಚಕಂಚುಕಗಳನ್ನು ಹೋಗಲಾಡಿಸಿಕೊಂಡು ತನ್ನ ಸ್ವಸ್ವರೂಪ ಜ್ಞಾನವನ್ನು ಸಂಪಾದಿಸಿಕೊಂಡು ಸರ್ವಜ್ಞನಾಗಿರುವ ಆ ಶಿವನಲ್ಲಿ ಸಾಮರಸ್ಯವನ್ನು ( ಲಿಂಗಾಂಗ ಸಾಮರಸ್ಯವನ್ನು ) ಹೊಂದಬೇಕು ಎಂಬುದಾಗಿ ಶಿವಾದ್ವೈತ ಸಿದ್ಧಾಂತವು ಹೇಳುತ್ತದೆ.

ಇದೇ ವಿಷಯವನ್ನು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು ಇನ್ನೊಂದು ರೀತಿಯಲ್ಲಿ ವಿವರಿಸುತ್ತದೆ. ಶಿವನು ಸೂಕ್ಷ್ಮ ಶಕ್ತಿಯಿಂದ ಕೂಡಿಕೊಂಡಿರುವುದರಿಂದ "ಸೂಕ್ಷ್ಮ ಶಕ್ತಿ ವಿಷ್ಟನು" ಎಂದೆನಿಸಿಕೊಳ್ಳುತ್ತಾನೆ. ಜೀವನು ಸ್ಥೂಲ ಶಕ್ತಿಯಿಂದ ಕೂಡಿಕೊಂಡಿರುವುದರಿಂದ "ಸ್ಥೂಲಶಕ್ತಿ ವಿಶಿಷ್ಟನು" ಎಂದೆನಿಸಿಕೊಳ್ಳುತ್ತಾನೆ. ಸೂಕ್ಷ್ಮ ಶಕ್ತಿ ವಿಶಿಷ್ಟನಾಗಿರುವ ಕಾರಣದಿಂದಲೇ ಶಿವನು ಸರ್ವಜ್ಞನು, ಸರ್ವಕರ್ತನು ಆಗಿರುತ್ತಾನೆ. ಸ್ಥೂಲಶಕ್ತಿ ವಿಶಿಷ್ಟನಾಗಿರುವ ಕಾರಣದಿಂದಲೇ ಜೀವನು ಅಲ್ಪಜ್ಞನು, ಅಲ್ಪ ಕರ್ತನು ಆಗಿರುತ್ತಾನೆ. ಈ ರೀತಿಯ ಶಿವ–ಜೀವರುಗಳ ನಡುವಿನ ವ್ಯತ್ಯಾಸಕ್ಕೂ ಸಹಿತ ಜೀವನ ಸುತ್ತಲೂ ಆವರಿಸಿರುವ ಮಲತ್ರಯ ಮತ್ತು ಪಂಚ ಕಂಚುಕಗಳೇ ಕಾರಣವಾಗಿವೆ. ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವಾದಿ ಗುಣಗಳ ರೂಪದಲ್ಲಿ ತೋರುತ್ತಿರುವ ಈ ಭಿನ್ನತೆಯನ್ನು ಹೋಗಲಾಡಿಸಿ ಕೊಂಡು ಮೂಲತ: ಶಿವನ ಅಂಶನೇ ಆಗಿರುವ ಜೀವನು ( ಲಿಂಗದ ಅಂಗವೇ ಆಗಿರುವ ಅಂಗನು ) ಪುನ: ಶಿವನಲ್ಲಿ ( ಅಥವಾ ಲಿಂಗದಲ್ಲಿ ) ಸಮರಸನಾಗಬೇಕೆಂದು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು ಹೇಳುತ್ತದೆ.

ಸತ್ಯವನ್ನು ನುಡಿಯುವುದಷ್ಟೇ ಸತ್ಯವಲ್ಲ. ಶೋಧನೆ ಮಾಡುತ್ತಾ ಹೋದಂತೆಲ್ಲಾ ಸತ್ಯದ ಆಳವು ಹೆಚುತ್ತಾ ಹೋಗುತ್ತದೆ. ಕೆಲವರು ಸತ್ಯವು ಕಹಿಯಾಗಿರುತ್ತದೆ ಎಂಬ ತಪ್ಪು ತಿಳುವಳಿಕೆಯಿಂದಾಗಿ ಸತ್ಯವನ್ನು ಎದುರಿಸಲು ಹಿಂಜರಿಯುತ್ತಾರೆ. ಆದರೆ ವೈದ್ಯರು ರೋಗಿಗೆ ಕೊಡುವ

ಔಷಧಿಯು ಎಷ್ಟು ಕಹಿಯಾಗಿರುತ್ತದೆಯೋ ಅಷ್ಟೇ ಕಹಿಯಾಗಿರುವ ಈ ಸತ್ಯವನ್ನು ನಾವು ಎದುರಿಸಿದಾಗ ಮತ್ತು ಅದನ್ನು ನಮ್ಮ ನಿಜ ಜೀವನದಲ್ಲಿ ಅಳವಡಿಸಿಕೊಂಡಾಗ ನಮ್ಮ ಜೀವನವು ಬಲು ಸುಂದರವಾಗಿ ಪರಿಣಮಿಸುತ್ತದೆ.

## ಅಷ್ಟಾವರಣಗಳು

ಜೀವನು ತನ್ನ ಸ್ವಸ್ವರೂಪ ಜ್ಞಾನವನ್ನು ಸಂಪಾದಿಸಿಕೊಂಡು ಆ ಶಿವನಲ್ಲಿ ಸಾಮರಸ್ಯವನ್ನು ಹೊಂದಬೇಕಾದರೆ ಸದ್ಗುಣ ಸಂಪತ್ತನ್ನು ಗಳಿಸಿಕೊಂಡು ಸನ್ಮಾರ್ಗದಲ್ಲಿ ನಡೆಯಬೇಕಾಗುತ್ತದೆ. ಸದ್ಗುಣ ಸಂಪನ್ನನಾಗಿ ಸನ್ಮಾರ್ಗದಲ್ಲಿ ನಡೆಯುತ್ತಿರುವ ಜೀವನು ತನಗೆ ಅಂಟಿಕೊಳ್ಳಬಹುದಾದ ದುಶ್ಚಟ, ದುರ್ಗುಣ ಮತ್ತು ದುಷ್ಟ ಕಾಮನೆಗಳಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಬೇಕಾಗುತ್ತದೆ. ದೇಹದ ಮೇಲೆ ಕೇವಲ ಅರಿವೆಗಳನ್ನು ಧರಿಸಿಕೊಂಡ ಮಾತ್ರಕ್ಕೆ ನಮಗೆ ರಕ್ಷಣೆ ದೊರೆಯುವದಿಲ್ಲ. ನಾವು ಧರಿಸಿಕೊಂಡ ಅರಿವೆಗಳು ನಮ್ಮನ್ನು ಕೇವಲ ಬಿಸಿಲು, ಚಳಿ, ಮತ್ತು ಮಳೆಗಳಿಂದ ರಕ್ಷಿಸಲು ಸಮರ್ಥವಾಗುತ್ತವೆ. ಆದರೆ ದುಶ್ಚಟ, ದುರ್ಗುಣ ಮತ್ತು ದುಷ್ಟ ಕಾಮನೆಗಳು ನಮಗೆ ಅಂಟಿಕೊಳ್ಳದಂತೆ ಅವುಗಳಿಂದ ನಮ್ಮನ್ನು ನಾವು ರಕ್ಷಿಸಿಕೊಳ್ಳಬೇಕಾದರೆ ನಾವು ಅಷ್ಟಾವರಣಗಳನ್ನು ಧರಿಸಿಕೊಳ್ಳಬೇಕಾಗುತ್ತದೆ. ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ ಮಂತ್ರ, ಪಾದೋದಕ ಮತ್ತು ಪ್ರಸಾದ ಎಂಬ ಎಂಟು ಆವರಣಗಳೇ ಅಷ್ಟಾವರಣಗಳೆನಿಸಿಕೊಳ್ಳುತ್ತವೆ. ಇವುಗಳಲ್ಲಿ ಗುರು, ಲಿಂಗ ಮತ್ತು ಜಂಗಮ ಇವು ಮೂರು ಪೂಜ್ಯ ವಸ್ತುಗಳು. ವಿಭೂತಿ, ರುದ್ರಾಕ್ಷಿ ಮತ್ತು ಮಂತ್ರ ಇವು ಪೂಜ್ಯ ವಸ್ತುಗಳನ್ನು ಒಲಿಸಿಕೊಳ್ಳುವುದಕ್ಕೆ ಇರುವ ಮೂರು ಸಾಧನಗಳು. ಇನ್ನು ಪೂಜಕನು ಪೂಜ್ಯ ವಸ್ತುಗಳನ್ನು ಪೂಜಿಸಿದಾಗ ಆತನಿಗೆ ಸಿಗುವ ಪ್ರತಿಫಲಗಳೇ ಪಾದೋದಕ ಮತ್ತು ಪ್ರಸಾದಗಳು.

ಶ್ರೀ ಗುರುವು ಜೀವನಿಗೆ ಧರ್ಮೋಪದೇಶ ಮಾಡಿ ಶಿವನೊಡನೆ ಸಾಮರಸ್ಯ ಹೊಂದುವ ಮಾರ್ಗದ ದರ್ಶನ ಮಾಡಿಸುತ್ತಾನೆ. "ಯಾವನು ಶಿವನೋ ಅವನೇ ಗುರುವೆಂದೂ, ಯಾವನು ಗುರುವೋ ಅವನೇ ಶಿವನೆಂದು ತಿಳಿಯಬೇಕು. ಪರಿಪೂರ್ಣ ಜ್ಞಾನಿಯು ಜ್ಞಾನ ಪ್ರಾಪ್ತಿಗೋಸ್ಕರ ಅವರಿಬ್ಬರಲ್ಲಿಯೂ ಭೇದ ಬುದ್ಧಿಯನ್ನು ಮಾಡಬಾರದು" ಮತ್ತು "ಗುರುಭಕ್ತಿ ಶೂನ್ಯನಿಗೆ ಶಿವಭಕ್ತಿಯು ಹುಟ್ಟುವದಿಲ್ಲ. ಆದುದರಿಂದ ಶಿವನಂತೆ ಗುರುವಿನಲ್ಲಿಯೂ ಭಕ್ತಿಯನ್ನಿಡಬೇಕು" ಎಂಬುದಾಗಿ "ಸಿದ್ಧಾಂತ ಶಿಖಾಮಣಿ" ಗ್ರಂಥದ ಗುರು ಮಹಾತ್ಮ್ಯಸ್ಥಲದಲ್ಲಿ ಹೇಳಲ್ಪಟ್ಟಿದೆ. ಅಹಂಕಾರ ವ್ಯಾಮೋಹಗಳೆರಡನ್ನು ಹೃದಯದಿಂದ ದೂರ ಮಾಡುವುದೇ ಗುರು ಕೃಪೆಯ ದಿವ್ಯ ಫಲವು. ಶ್ರೀ ಗುರುವಿನ ಕೃಪೆಯು ದೊರಕಿದೊಡನೆಯೇ ಶಿವನು ನಮ್ಮ ಯೋಗಕ್ಷೇಮವನ್ನು ವಹಿಸಿಕೊಳ್ಳುವನು. ಶಿವನ ಪ್ರಸಾದವು ನಮಗೆ ದೊರಕಿದೊಡನೆಯೇ ಎಲ್ಲ ಬಗೆಯ ದುಃಖ ದುಮ್ಮಾನಗಳು ತೊಲಗುತ್ತವೆ. ಶಿವನ ನಿರಂತರ ಚಿಂತನದಿಂದ ಪಾಪಗಳೆಲ್ಲವನ್ನು ಕಳೆದುಕೊಂಡ ಜೀವನು ಶಿವನ ಸಾನಿಧ್ಯವನ್ನು ಗಳಿಸಿಕೊಂಡು ನಿತ್ಯ ಮುಕ್ತನಾಗಿ ಬದುಕುವುದು ನಿಶ್ಚಿತ. ಇದು ಯೋಗ್ಯವಾದ ಗುರುವಿನ ಕರುಣೆಯಿಂದಲೇ ಸಾಧ್ಯವಾಗುತ್ತದೆ. ಗುರು ಇಲ್ಲದಿದ್ದರೆ ಇನ್ನುಳಿದ ಯಾವ ಆವರಣಗಳೂ ನಮಗೆ ದೊರೆಯುವುದಿಲ್ಲ.

"ಲಿಂಗ" ಎಂಬ ಪದದ ಅರ್ಥವನ್ನು ವಿವರಿಸುವ ಹಲವಾರು ವ್ಯಾಖ್ಯೆಗಳುಂಟು. ಲಿಂಗ ಎಂದರೆ ಚಿಹ್ನೆ, ಗುರುತು ಅಥವಾ ಸಂಕೇತ. ಲಿಂಗವು ಪರಶಿವನ ಸಂಕೇತವು. ಸೃಷ್ಟಿಯು (ಜಗತ್ತು, ವಿಶ್ವ) ಚಿತ್–ಅಚಿತ್‌ಗಳಿಂದ ಕೂಡಿಕೊಂಡಿರುತ್ತದೆ ಈ ರೀತಿ ಚಿದ ಚಿದಾತ್ಮಕವಾಗಿರುವ ಸೃಷ್ಟಿಯು ಯಾವುದರಿಂದ ಹೊರಹೊಮ್ಮಿ ಯಾವುದರ ಸಹಾಯದಿಂದ ಬಾಳಿ ಬೆಳಗಿ ಯಾವುದರಲ್ಲಿ ಕೊನೆಗೆ ಅಡಗುವುದೋ ಅದುವೇ "ಲಿಂಗ" ಎಂದೆನಿಸಿಕೊಳ್ಳುತ್ತದೆ. ಗುಡಿಯಲ್ಲಿ ಸ್ಥಾಪಿಸಲ್ಪಟ್ಟಿರುವ ಲಿಂಗವನ್ನು ಸ್ಥಾವರಲಿಂಗವೆಂತಲೂ ಮತ್ತು ದೇಹದ ಮೇಲೆ ಧರಿಸಿಕೊಳ್ಳಬಹುದಾದ ಲಿಂಗವನ್ನು ಇಷ್ಟಲಿಂಗವೆಂತಲೂ ಕರೆಯುತ್ತಾರೆ.

ಸ್ವಸ್ವರೂಪ ಜ್ಞಾನವನ್ನು ಸಂಪಾದಿಸಿಕೊಂಡು ಸದಾವಕಾಲವೂ ಜೀವನ್ಮುಕ್ತ (ಅಥವಾ ಐಕ್ಯ) ಸ್ಥಿತಿಯಲ್ಲಿ ಇರುವ ಅನುಭಾವಿಗಳಿಗೆ, ಪೂಜ್ಯರಿಗೆ ಜಂಗಮ ಎನ್ನುವರು ಜಂಗಮರ ಆಗಮನವನ್ನು ವಸಂತ ಋತುವಿನ ಆಗಮನಕ್ಕೆ ಹೋಲಿಸುವರು.

"ಜೀವನು ತನ್ನ ಅಂತರಂಗದಲ್ಲಿ ಮನೆ ಮಾಡಿಕೊಂಡಿರಬಹುದಾದ ದುಷ್ಟ ಕಾಮನೆಗಳನ್ನು ಸುಟ್ಟು ಭಸ್ಮ ಮಾಡಬೇಕು." ಎಂಬುದರ ಸಂಕೇತವಾಗಿ ವಿಭೂತಿ ಎಂದು ಕರೆಯಲ್ಪಡುವ ಭಸ್ಮವನ್ನು ಹಣೆಯ ಮೇಲೆ ಮತ್ತು ದೇಹದ ಸೂಕ್ತವಾದ ಭಾಗಗಳ ಮೇಲೆ ಧರಿಸಿಕೊಳ್ಳಬೇಕು.

ಶಿವನು ತ್ರಿಪುರಾಸುರರನ್ನು ಸಂಹಾರ ಮಾಡುವಾಗ ಆತನ ನೇತ್ರಗಳಿಂದ ಜಲಬಿಂದುಗಳು ಉದುರಿದಂತೆ. ಆ ಜಲಬಿಂದುಗಳಿಂದ ರುದ್ರಾಕ್ಷಗಳು ಉತ್ಪನ್ನವಾದವು ಎಂದು ಹೇಳುತ್ತಾರೆ. ಜೀವನು ರುದ್ರಾಕ್ಷಗಳ ದರ್ಶನ, ಸ್ಪರ್ಷನ, ಸ್ಮರಣ, ಪೂಜನ ಮತ್ತು ಧಾರಣ ಮಾಡಿದರೆ ಸಮಸ್ತ ಪಾಪಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.

ಜೀವನು "ನಮಃ ಶಿವಾಯ" ಎಂಬ ಪಂಚಾಕ್ಷರ ಮಂತ್ರವನ್ನಾಗಲೀ ಅಥವಾ "ಓಂ ನಮಃ ಶಿವಾಯ" ಎಂಬ ಪ್ರಣವ ಪಂಚಾಕ್ಷರಿ ಮಂತ್ರವನ್ನಾಗಲೀ ಅವುಗಳ ಅರ್ಥವನ್ನು ತಿಳಿದುಕೊಂಡು ಜಪಿಸಿದರೆ ಭವ ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಯಾವುದನ್ನು ಮನನ ಮಾಡುವುದರಿಂದ ಜೀವನು ಭವದ ಸಾಗರವನ್ನು ದಾಟಲು ಸಹಾಯವಾಗುವುದೋ ಅದುವೇ ಮಂತ್ರ ಎನಿಸಿಕೊಳ್ಳುತ್ತದೆ.

ಸರ್ವ ಮಂಗಲಗಳಿಗೆ ಮಂಗಲವೂ, ಸರ್ವಪಾವನಗಳಿಗೆ ಪಾವನವೂ ಆಗಿರುವ ಶಿವಪಾದೋದಕ ಸೇವನವು ಮಾನವ ಜೀವಿಗಳಿಗೆ ಸಕಲ ಸಿದ್ಧಿಗಳನ್ನು ಅನುಗ್ರಹಿಸುವಂತದಾಗಿರುವದು. ಶಿವಭಕ್ತನು ಶಿವನ ಪಾದೋದಕವನ್ನು ಹೇಗೆ ಭಕ್ತಿಯಿಂದ ಸ್ವೀಕರಿಸುವನೋ ಹಾಗೆಯೇ ಶಿವಸ್ವರೂಪರಾದ ಗುರು ಜಂಗಮರ ಪಾದೋದಕವನ್ನೂ ನಿತ್ಯದಲ್ಲಿ ಸ್ವೀಕರಿಸಬೇಕು. ನೀರಿಗೆ ಗುರುವಿನ ಅಂತಃಕರಣ ಕೃಪಾರಸವು ಬೆರೆತಾಗ ಅದು ಪಾದೋದಕವೆನಿಸುತ್ತದೆ.

ಅಪಾರವಾದ ತೇಜಸ್ಸುಳ್ಳ ಶಿವನು ಸಮಸ್ತ ಲೋಕಗಳಿಗೂ ಗುರುವಾಗಿರುವುದರಿಂದ ಶಿವಭಕ್ತಿ ಪರಾಯಣರು ತಾವು ಉಪಭೋಗಿಸುವ ಸಮಸ್ತ ಪದಾರ್ಥಗಳನ್ನೂ ಶಿವನಿಗೆ ಸಮರ್ಪಿಸಿ ನಂತರ ಅವು ಶಿವನು ತಮಗೆ ನೀಡಿರುವ ಪ್ರಸಾದವೆಂಬ ಭಾವನೆಯಿಂದ ಸ್ವೀಕರಿಸಿದರೆ ಅದು ಪ್ರಸಾದವೆನಿಸಿಕೊಳ್ಳುತ್ತದೆ. ಶಿವಲಿಂಗ ಪ್ರಸಾದ ಸ್ವೀಕಾರದಿಂದ ಜೀವನಿಗೆ ಯಾವ ಫಲವು ಪ್ರಾಪ್ತವಾಗುವುದೋ ಆ ಫಲವು ಗುರು–ಜಂಗಮರ ಪ್ರಸಾದ ಸ್ವೀಕಾರದಿಂದಲೂ ಪ್ರಾಪ್ತವಾಗುತ್ತದೆ. ಪದಾರ್ಥಕ್ಕೆ ಗುರು–ಲಿಂಗ–ಜಂಗಮರ ಕಾರುಣ್ಯ ರಸವು ಬೆರೆತಾಗ ಅದು ಪ್ರಸಾದವೆನಿಸಿಕೊಳ್ಳುತ್ತದೆ. ಈ ರೀತಿಯಾಗಿ ಪಾದೋದಕ ಮತ್ತು ಪ್ರಸಾದಗಳು ಗುರು ಕರುಣೆ ಹರಿದು ಬರಲಿಕ್ಕೆ ಮಾಧ್ಯಮಗಳಾಗಿ ಕಾರ್ಯ ನಿರ್ವಹಿಸುತ್ತವೆ.

## ಪಂಚಾಚಾರಗಳು

ಮನುಷ್ಯನು (ಅಥವಾ ಜೀವನು) ಸಮಾಜದಲ್ಲಿ ನೀತಿವಂತನಾಗಿ ಬದುಕಿದಾಗಲೇ ತನ್ನ ಸ್ವಸ್ವರೂಪಜ್ಞಾನವನ್ನು ಸಂಪಾದಿಸಿಕೊಂಡು ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದುವುದಕ್ಕೆ ಯೋಗ್ಯವೆನಿಸಿಕೊಳ್ಳುತ್ತಾನೆ. ಅಷ್ಟಾವರಣಗಳ ಸಹಾಯದಿಂದ ದುಶ್ಚಟ, ದುರ್ಗುಣ ಮತ್ತು ದುಷ್ಟ ಕಾಮನೆಗಳಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಲು ಸಮರ್ಥನಾದ ಜೀವನು ಸಮಾಜದಲ್ಲಿ ನೀತಿವಂತನಾಗಿ ಬಾಳಿದಾಗಲೇ ಸದ್ಗುಣ ಸಂಪನ್ನ ಎಂದೆನಿಸಿಕೊಳ್ಳುತ್ತಾನೆ. ಜೀವನು ಪಂಚಾಚಾರಗಳನ್ನು ಪಾಲಿಸುತ್ತ ತನ್ನ ಆಚಾರ ವಿಚಾರಗಳನ್ನು ನಿಯಂತ್ರಣದಲ್ಲಿ ಇರಿಸಿಕೊಂಡಾಗಲೇ ನೀತಿವಂತನೆನಿಸಿಕೊಳ್ಳುತ್ತಾನೆ. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಮತ್ತು ಭೃತ್ಯಾಚಾರಗಳು ಪಂಚಾಚಾರಗಳೆನಿಸಿಕೊಳ್ಳುತ್ತವೆ.

ದೇವನೊಬ್ಬನೇ ಎಂದು ಧೃಡವಾಗಿ ನಂಬಿ ಒಬ್ಬ ದೇವರನ್ನು ಪೂಜಿಸುವುದು ಏಕದೇವೋಪಾಸನೆ ಎನಿಸಿಕೊಳ್ಳುತ್ತದೆ. ಜೀವನು ತನ್ನ ನಿಜ ಜೀವನದಲ್ಲಿ ಏಕ ದೇವೋಪಾಸನೆಯನ್ನು ಅಳವಡಿಸಿಕೊಳ್ಳುವುದೇ ಲಿಂಗಾಚಾರ ಎನಿಸಿಕೊಳ್ಳುತ್ತದೆ. ಜೀವನು ಪರಮಾತ್ಮನ ಕುರುಹಾಗಿರುವ ಲಿಂಗವನ್ನು ಪೂಜಿಸಿದ ನಂತರ ಬೇರೆ ಏನನ್ನೂ ಪೂಜಿಸುವ ಆವಶ್ಯಕತೆ ಇರುವದಿಲ್ಲ.

ಕಾಯಕವೇ ಕೈಲಾಸವೆಂದು ನಂಬಿ ಇನ್ನೊಬ್ಬರನ್ನು ಶೋಷಣೆ ಮಾಡದೇ ಸತ್ಯ, ಶುದ್ಧವಾದ ಉದ್ಯೋಗದಿಂದ ಹಣ ಗಳಿಸಿ, ಅದೆಲ್ಲವೂ ಶಿವನ ಪ್ರಸಾದವೆಂಬ ಭಾವನೆಯಿಂದ ತನಗೆ ಅವಶ್ಯವಿದ್ದಷ್ಟನ್ನು ತಾನು ಉಪಯೋಗಿಸಿ ಹೆಚ್ಚಿನದನ್ನು ಸರ್ವರ ಹಿತಕ್ಕಾಗಿ ಶ್ರಮಿಸುತ್ತಿರುವ ಗುರು-ಲಿಂಗ ಜಂಗಮರಿಗೂ ಮತ್ತು ಸಮಾಜದಲ್ಲಿನ ಬಡ ಜನರಿಗೂ ನೀಡಿ ಸರ್ವರ ಹಿತವನ್ನು ಸಾಧಿಸುವುದೇ ಸದಾಚಾರ ಎನಿಸಿಕೊಳ್ಳುವುದು.

ಶಿವನ ದೃಷ್ಟಿಯಲ್ಲಿ ಸಕಲ ಜೀವಾತ್ಮರು ಸರಿ ಸಮಾನರಿರುವರು. "ಶಿವಭಕ್ತರಲ್ಲಿ ಕುಲ, ಗೋತ್ರ, ಜಾತಿ, ವರ್ಣಾಶ್ರಮವನರಸದೆ ಅವರೊಕ್ಕುದಕೊಂಬುದೇ ಶಿವಾಚಾರ". ಶಿವಲಿಂಗವನ್ನು ಕೊರಳಲ್ಲಿ ಧರಿಸಿಕೊಂಡು ಏಕದೇವೋಪಾಸನೆ ಮಾಡುತ್ತಿರುವ ಎಲ್ಲ ಶಿವಭಕ್ತರೂ ಸರಿ ಸಮಾನರೆಂದು ತಿಳಿದುಕೊಳ್ಳಬೇಕು. ಶಿವಭಕ್ತರು ನೀಡಿದುದನ್ನು ಸ್ವೀಕರಿಸಲು ಹಿಂಜರಿಯಬಾರದು.

ಶಿವಾಚಾರದ ನಿಂದೆಯು ಕೇಳದಿರುವುದೇ ಗಣಾಚಾರ. ತಾನು ಸ್ವತಃ ಶಿವಾಚಾರಿಯಾಗಿದ್ದುಕೊಂಡು ಪರರು ಶಿವಾಚಾರದ ನಿಂದೆಯನ್ನು ಮಾಡಿದಾಗ ಅದನ್ನು ಸಹಿಸಿಕೊಳ್ಳದಿರುವುದೇ ಗಣಾಚಾರ. ಶಿವಾಚಾರಿಯಾದವನು ಸಮಾಜದಲ್ಲಿ ಜರುಗಬಹುದಾದ ಅನ್ಯಾಯ, ಅತ್ಯಾಚಾರ, ಜಾತೀಯತೆ ಮತ್ತು ಸಾಮಾಜಿಕ ಶೋಷಣೆ ಮುಂತಾದ ಅನಿಷ್ಟಗಳ ವಿರುದ್ಧ ಧೈರ್ಯದಿಂದ ಹೋರಾಡುವುದೇ ಗಣಾಚಾರ.

ಇನ್ನು ಕೊನೆಯದಾಗಿ "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ನುಡಿಯನ್ನು ನಿಜಜೀವನದಲ್ಲಿ ಅಳವಡಿಸಿಕೊಂಡು ಶಿವಭಕ್ತರನ್ನು ಭಕ್ತಿ ಗೌರವಗಳಿಂದ ಕಾಣುವುದೇ ಭೃತ್ಯಾಚಾರ. ಶರಣರ ಸೇವಕನಾಗಿ ಕಿಂಕರ ಭಾವದಿಂದ ಸೇವೆ ಮಾಡುವುದೇ ಭೃತ್ಯಾಚಾರ ಎನಿಸಿಕೊಳ್ಳುತ್ತದೆ.

## ಷಟ್‌ಸ್ಥಲ ಮಾರ್ಗ

ಅಷ್ಟಾವರಣಗಳ ಸಹಾಯದಿಂದ ದುಶ್ಚಟ, ದುರ್ಗುಣ ಮತ್ತು ದುಷ್ಟ ಕಾಮನೆಗಳಿಂದ ತನ್ನನ್ನು ತಾನು ರಕ್ಷಿಸಿಕೊಂಡು, ಪಂಚಾಚಾರಗಳನ್ನು

ಪಾಲಿಸುತ್ತ ಸಮಾಜದಲ್ಲಿ ನೀತಿವಂತನಾಗಿ ಬದುಕುವ ಜೀವನು (ಮನುಷ್ಯನು) ತನ್ನ ಗುರಿಯನ್ನು ಬೇಗನೆ ತಲುಪುತ್ತಾನೆ. ಆಣವಾದಿ ಮಲತ್ರಯಗಳಿಂದಲೂ ಮತ್ತು ಪಂಚಕಂಚುಕಗಳಿಂದಲೂ ಆವೃತನಾಗಿ ಅಲ್ಪಜ್ಞತ್ವಾದಿ ಸಂಕುಚಿತ ಶಕ್ತಿಗಳಿಂದ ಕೂಡಿದ ಜೀವಾತ್ಮನಿಗೆ ಸದ್ಗುರು ಯಾವಾಗ ಧರ್ಮದೀಕ್ಷೆ ಎಂಬ ಸಂಸ್ಕಾರವನ್ನು ನೀಡಿ, ಅಷ್ಟಾವರಣ ಹಾಗೂ ಪಂಚಾಚಾರಗಳನ್ನು ಕುರಿತು ಜ್ಞಾನೋಪದೇಶ ಮಾಡುವರೋ ಆಗ ಅವನಲ್ಲಿರುವ ಆಣವಾದಿ ಮಲತ್ರಯಗಳು ತೊಲಗಿ ಆತನ ಅಲ್ಪಜ್ಞತ್ವ ಮುಂತಾದ ಸಂಕುಚಿತ ಶಕ್ತಿಗಳೇ ಭಕ್ತಿ ರೂಪದಲ್ಲಿ ಪರಿವರ್ತನೆಗೊಳ್ಳುತ್ತವೆ. ಅವನ ಸಾಧನೆಯು ಬೆಳೆದಂತೆಲ್ಲ ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ ಮತ್ತು ಸಮರಸಗಳೆಂಬ ಭಕ್ತಿಗಳು ಆತನಿಗೆ ಸಿದ್ಧಿಸುತ್ತವೆ. ಈ ಭಕ್ತಿಗಳ ಸಹಾಯದಿಂದಲೇ ಇವನು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯಗಳೆಂಬ ಸ್ಥಲಗಳನ್ನು ಹೊಂದುತ್ತಾನೆ. ಆರು ಸ್ಥಲಗಳನ್ನೊಳಗೊಂಡಿರುವ ಈ ಶಿವಯೋಗ ಮಾರ್ಗವೇ "ಷಟಸ್ಥಲ ಮಾರ್ಗ" ಎಂದೆನಿಸಿಕೊಳ್ಳುತ್ತದೆ.

ಜೀವನು ಈ ಮಾರ್ಗದಲ್ಲಿ ಕ್ರಮಿಸುವಾಗ ತನ್ನಲ್ಲಿ ಭಕ್ತಿ, ಜ್ಞಾನ ಮತ್ತು ಕ್ರಿಯಾಶೀಲತೆಗಳನ್ನು ಸೂಕ್ತವಾದ ಪ್ರಮಾಣದಲ್ಲಿ ಅಳವಡಿಸಿಕೊಳ್ಳಬೇಕು ಮತ್ತು ಅವುಗಳನ್ನು ಹೆಚ್ಚಿಸಿಕೊಳ್ಳಬೇಕು. ಕೇವಲ ಭಕ್ತಿಯಾಗಲೀ ಅಥವಾ ಕೇವಲ ಕ್ರಿಯಾಶೀಲತೆಯಾಗಲೀ, ಉಪಯೋಗಕ್ಕೆ ಬರಲಾರವು. ಆದ್ದರಿಂದ ಜೀವನು ನಿಜಭಕ್ತಿ, ಸುಜ್ಞಾನ ಮತ್ತು ಉತ್ತಮ ಕ್ರಿಯಾಶೀಲತೆಗಳೆಲ್ಲವನ್ನೂ ಒಟ್ಟಿಗೆ ತನ್ನಲ್ಲಿ ಅಳವಡಿಸಿಕೊಳ್ಳಬೇಕು. ಷಟ್‌ಸ್ಥಲಗಳನ್ನು ಕ್ರಮಿಸಲು ಶಕ್ತನಾದ ಜೀವಾತ್ಮನು ಐಕ್ಯಸ್ಥಲದಲ್ಲಿ ಸಮರಸ ಭಕ್ತಿಯ ಪ್ರಭಾವದಿಂದ ತನ್ನ ಸಂಕುಚಿತ ಶಕ್ತಿಗಳನ್ನೆಲ್ಲ ವಿಕಾಸಗೊಳಿಸಿಕೊಂಡು ಸೂಕ್ಷ್ಮ ಶಕ್ತಿ ವಿಶಿಷ್ಟನಾದ ಪರಶಿವನೊಂದಿಗೆ ಸಮರಸ ಹೊಂದುತ್ತಾನೆ. ಜೀವ ಮತ್ತು ಶಿವ ಇವರುಗಳು ಈ ರೀತಿ ಸಮರಸ ಹೊಂದುವುದೇ ಲಿಂಗಾಂಗ ಸಾಮರಸ್ಯ ಎಂದೆನಿಸಿಕೊಳ್ಳುತ್ತದೆ. ಲಿಂಗಾಂಗ ಸಾಮರಸ್ಯದ ಸಂಪಾದನೆಯೇ ಮುಕ್ತಿ ಎನಿಸಿಕೊಳ್ಳುವುದು.

## ಹಿರೇಮಠಗಳು

ಶಿವಭಕ್ತರ ದಿನನಿತ್ಯದ ಜೀವನದಲ್ಲಿ ಹಿರೇಮಠಗಳು ಪ್ರಮುಖ ಪಾತ್ರ ವನ್ನು ವಹಿಸುತ್ತವೆ. ಶ್ರೀ ಗುರುವಿನ ವಾಸ ಸ್ಥಾನಗಳೇ ಮಠಗಳು. ಮನುಷ್ಯನು ಸೇವಿಸುವ ಆಹಾರವು ಬೆಳೆಯುವುದು ಮಣ್ಣಿನಲ್ಲಿ. ಆತನು ಕುಡಿಯುವ ನೀರು ಮೋಡಗಳಿಂದ ಸುರಿಯುತ್ತದೆ. ಆತನು ಸೇವಿಸುವ ಗಾಳಿಯು ವಾತಾವರಣದಿಂದ ಲಭಿಸುತ್ತದೆ. ಆತನ ಜೀವನಕ್ಕೆ ಆಧಾರವಾಗಿ ರುವ ಬೆಳಕು ದೊರೆಯುವುದು ಸೂರ್ಯನಿಂದ. ಈ ಎಲ್ಲ ನಿಸರ್ಗ ಸಂಪತ್ತು ಗಳು ಇಲ್ಲದಿದ್ದರೆ ಮನುಷ್ಯನು ಬದುಕಲಾರ. ಈ ರೀತಿಯಾಗಿ ಮನುಷ್ಯನ ದಿನ ನಿತ್ಯದ ಜೀವನವು ಪಂಚ ಭೂತಗಳೆಂದು ಕರೆಯಲ್ಪಡುವ ಆಕಾಶ ತತ್ತ್ವ, ವಾಯು ತತ್ತ್ವ, ತೇಜಸ್ತತ್ತ್ವ, ಜಲತತ್ತ್ವ ಮತ್ತು ಪೃಥ್ವಿ ತತ್ತ್ವಗಳ ಮೇಲೆ ಸಂಪೂರ್ಣವಾಗಿ ಅವಲಂಬಿಸಿರುತ್ತದೆ. ಈ ಎಲ್ಲ ನಿಸರ್ಗ ಸಂಪತ್ತು ಗಳನ್ನು ಮನುಷ್ಯನು ವಿಶ್ವರೂಪಿಯಾಗಿರುವ ಶಿವನಿಂದ, ಶಿವಪ್ರಸಾದದ ರೂಪ ದಲ್ಲಿ ಪಡೆದುಕೊಳ್ಳುತ್ತಾನೆ. ಆದುದರಿಂದ ಕೃತಜ್ಞತಾಭಾವದಿಂದ ಲಿಂಗರೂಪಿ ಯಾಗಿರುವ ಆ ಶಿವನನ್ನು ಪೂಜಿಸಬೇಕಾದುದು ನಮ್ಮೆಲ್ಲರ ನಿತ್ಯದ ಕರ್ತವ್ಯ ವಾಗಿದೆ. ಈ ನಿತ್ಯದ ಕರ್ತವ್ಯವನ್ನು ಪಾಲಿಸುವಂತೆ ಮಾಡಿ ಆ ಮೂಲಕ ಮನುಷ್ಯನನ್ನು ಶಿವಪಥದತ್ತ ತಿರುಗಿಸುವುದೇ ಈ ಹಿರೇಮಠಗಳ ಮುಖ್ಯ ಕಾರ್ಯವಾಗಿರುತ್ತದೆ. ಮಾನವನು ಪಂಚಭೂತಗಳಿಂದ ಪಡೆದ ಸಾಲವನ್ನು ಲಿಂಗಾರ್ಚನೆಯ ಮೂಲಕ ತೀರಿಸುವ ವಿಧಾನವನ್ನು ಹಿರಿಯ ಮಠಗಳು ಕಲ್ಪಿಸುತ್ತವೆ.

ಮನುಷ್ಯನು ಇನ್ನೂ ಬಾಲ್ಯಾವಸ್ಥೆಯಲ್ಲಿರುವಾಗಲೇ ಆತನಿಗೆ ಲಿಂಗ ದೀಕ್ಷೆಯ ಅವಶ್ಯಕತೆಯು ಇರುತ್ತದೆ. ತಾರುಣ್ಯಾವಸ್ಥೆಗೆ ಬಂದಾಗ ಆತನಿಗೆ "ಮದುವೆ" ಎಂಬ ಸಂಸ್ಕಾರದ ಅವಶ್ಯಕತೆ ಇರುತ್ತದೆ. ಆತನು ಸದ್ಗೃಹಸ್ಥ ನಾಗಿ ಧರ್ಮ ಮಾರ್ಗದಲ್ಲಿ ನಡೆಯುವಂತಾಗಲು ಆತನಿಗೆ ಶ್ರೀ ಗುರುವಿನಿಂದ ದೊರೆಯುವ ಧರ್ಮೋಪದೇಶದ ಅವಶ್ಯಕತೆ ಇರುತ್ತದೆ. ಆತನು ಮರಣ ಹೊಂದಿದ ನಂತರವೂ ಸಹಿತ ಆತನ ಮೃತ ಶರೀರಕ್ಕೆ ಸೂಕ್ತವಾದ ಶವ

ಸಂಸ್ಕಾರದ ಅವಶ್ಯಕತೆ ಇರುತ್ತದೆ. ಈ ರೀತಿಯಾಗಿ ಬಾಲ್ಯದಿಂದಲೂ ಹಿಡಿದು ಸಾವಿನ ವರೆಗೂ ಅಷ್ಟೇ ಅಲ್ಲ, ಸತ್ತ ಮೇಲೂ ಸಂಸ್ಕಾರವೀಯುವ ಹೊಣೆಗಾರಿಕೆಯನ್ನು ಈ ಹಿರೇಮಠಗಳು ನಿರ್ವಹಿಸುತ್ತ ಬಂದಿವೆ.

ಹಿರೇಮಠಗಳು ಬಸವಣ್ಣನವರ ಕಾಲಕ್ಕಿಂತಲೂ ಮೊದಲೇ ಅಸ್ತಿತ್ವದಲ್ಲಿದ್ದ ಪ್ರಾಚೀನ ಕಾಲದ ಮಠಗಳು. ಬಸವಣ್ಣನವರು ಜೀವಿಸಿದ್ದು ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ. ಬಾಲಕ ಬಸವಣ್ಣನವರು ಮನೆಯನ್ನು ತೊರೆದು ಕೂಡಲ ಸಂಗಮ ಕ್ಷೇತ್ರಕ್ಕೆ ಆಗಮಿಸಿದರು. ಆಗ ಅಲ್ಲಿಯ ಸುಪ್ರಸಿದ್ಧ ಮಠವಾಗಿದ್ದ ಸಾರಂಗ ಹಿರೇಮಠದ ಪಟ್ಟಾಧ್ಯಕ್ಷರಾಗಿದ್ದವರು ಶ್ರೀಗುರು ಜಾತವೇದಮುನಿ ಶಿವಾಚಾರ್ಯ ಸ್ವಾಮಿಗಳು. ಬಾಲಕ ಬಸವಣ್ಣನವರು ಇವರ ಆಶ್ರಯದಲ್ಲಿದ್ದುಕೊಂಡು ಇವರಿಂದಲೇ ಶಿವದರ್ಮ ದೀಕ್ಷೆಯನ್ನು ಪಡೆದುಕೊಂಡರು. ಮುಂದೆ ಬಸವಣ್ಣನವರು ತಾವು ಬಿಜ್ಜಳ ರಾಜನ ಮಹಾಪ್ರಧಾನಿಯಾಗಿದ್ದ ಕಾಲದಲ್ಲಿ ಕಲ್ಯಾಣ ಪಟ್ಟದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿದರು. ಮಹಾತಪಸ್ವಿ ಎನಿಸಿಕೊಂಡಿದ್ದ ಶ್ರೀ ಅಲ್ಲಮಪ್ರಭು ದೇವರನ್ನು ಅನುಭವ ಮಂಟಪ ಶೂನ್ಯ ಸಿಂಹಾಸನದ ಪ್ರಥಮ ಅಧ್ಯಕ್ಷರನ್ನಾಗಿ ಮಾಡಿದರು. ಶ್ರೀ ಅಲ್ಲಮಪ್ರಭು ದೇವರಿಂದ ಪ್ರಾರಂಭವಾದ ಈ ಪರಂಪರೆಯು "ವಿರಕ್ತ ಪರಂಪರೆ" ಎಂಬ ಹೆಸರಿನಿಂದ ಮುಂದುವರಿದುಕೊಂಡು ಬಂದಿತು. ಈ ಪರಂಪರೆಯಲ್ಲಿ ನಡೆದು ಬಂದಿರುವ ಎಲ್ಲ ಮಠಗಳು ವಿರಕ್ತಮಠಗಳೆಂದು ಕರೆಯಲ್ಪಡುವುದನ್ನು ನಾವು ಕಾಣುತ್ತೇವೆ. ಈ ವಿರಕ್ತಮಠಗಳು ಪ್ರಾರಂಭವಾದದ್ದು ಹನ್ನೆರಡನೆಯ ಶತಮಾನದಲ್ಲಿ ಎಂಬುದು ನಮಗೆ ಸ್ಪಷ್ಟವಾಗಿ ತಿಳಿದು ಬರುತ್ತದೆ. ಆದರೆ ಹಿರೇಮಠಗಳು ಎಷ್ಟು ಪ್ರಾಚೀನತೆಯನ್ನು ಹೊಂದಿವೆ ಎಂಬುದನ್ನು ತಿಳಿದುಕೊಳ್ಳುವುದು ಅಷ್ಟು ಸುಲಭವಲ್ಲ. ಈ ಹಿರೇಮಠಗಳು ಪಂಚಪೀಠಗಳ ಪರಂಪರೆಯಲ್ಲಿ ನಡೆದು ಬಂದಿರುವ ಮಠಗಳು.

ಪಂಚಪೀಠಗಳ ಪರಂಪರೆಯಲ್ಲಿ ನಡೆದು ಬಂದ ಮಠಗಳೆಲ್ಲವೂ ಹಿರೇಮಠಗಳೆಂದು ಕರೆಯಲ್ಪಡುತ್ತವೆ ಎಂದೇನೂ ಅಲ್ಲ. ಉದಾಹರಣೆಗಾಗಿ ಕೊಪ್ಪಳದ ಶ್ರೀ ಗವಿಮಠದ ಪುರಾತನ ಪರಂಪರೆಯನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಕೊಪ್ಪಳದ ಶ್ರೀ ಗವಿಮಠವು ಬಸವಾದಿ ಪ್ರಮಥರಿಗಿಂತ ಪೂರ್ವದವರಾದ ಶ್ರೀ ಕಾಶಿಚರವರ್ಯ ಶ್ರೀ ರುದ್ರಮುನಿ ಶಿವಾಚಾರ್ಯರಿಂದ ಸ್ಥಾಪಿಸ

ಲ್ಪಟ್ಟಿದೆ. ಅವರೇ ಅದರ ಮೂಲ ಕರ್ತೃಗಳು. ಅವರು ಕಾಶಿಯ ಜಂಗಮ ವಾಡಿ ಮಠದಿಂದ ಲೋಕೋದ್ಧಾರಕ್ಕಾಗಿ ಸಂಚರಿಸುತ್ತ ಹಂಪಿ ಕ್ಷೇತ್ರಕ್ಕೆ ಆಗಮಿಸಿದರು. ಅಲ್ಲಿ ಉದ್ಧಾನ ವೀರಭದ್ರೇಶ್ವರ ದೇವಸ್ಥಾನದ ಸಮೀಪದಲ್ಲಿ ಆಶ್ರಮವನ್ನು ಕಟ್ಟಿಕೊಂಡಿದ್ದರು. ನಂತರ ಕಮಲಾಪುರದ ಮುಖಾಂತರ ಸಂಚರಿಸುತ್ತ ಕೊಪ್ಪಳಕ್ಕೆ ದಯಮಾಡಿಸಿದರು. ಕೊಪ್ಪಳದ ಪೂರ್ವಕ್ಕೆ ಕಂಗೊಳಿಸುವ ಗುಡ್ಡದ ಗುಹೆಯಲ್ಲಿ ವಾಸ ಮಾಡಿದರು. ಇವರನ್ನು ಕಂಡ ಕೊಪ್ಪಳದ ಲಿಂಗನಗೌಡ ಮತ್ತಿತರ ಭಕ್ತರು ಇವರಲ್ಲಿಗೆ ಬಂದು ತಮ್ಮ ಮನೆ ಯಲ್ಲಿ ವಾಸವಾಗಿರಲು ಬೇಡಿಕೊಂಡರು. ಅವರು ಅದಕ್ಕೆ ಒಪ್ಪದಿರಲು ಗೌಡನು ಗವಿಯ ಸುತ್ತಮುತ್ತಲೂ ಸ್ವಚ್ಛಗೊಳಿಸಿ ವಾಸಕ್ಕೆ ಅನುವು ಮಾಡಿ ಕೊಟ್ಟನು. ಯಾವಾಗಲೂ ಗುಹೆಯಲ್ಲಿ ವಾಸ ಮಾಡುತ್ತಿದ್ದುದರಿಂದ ಗುಹೇಶ್ವರರೆಂತಲೂ, ಆ ಗವಿಯು ಗವಿಮಠವೆಂತಲೂ ಹೆಸರಾಯಿತು.

ಪ್ರತಿಯೊಂದು ಊರಲ್ಲಿಯೂ ಹಿರೇಮಠಗಳು ಇರುವದನ್ನು ನಾವು ಕಾಣುತ್ತೇವೆ. ಈ ಹಿರೇಮಠಗಳು ಪಂಚಪೀಠಗಳ ಪರಂಪರೆಯಲ್ಲಿ ನಡೆದು ಬಂದಿರುವ ಮಠಗಳೆಂಬುದನ್ನು ನಾವೀಗಾಗಲೇ ತಿಳಿದುಕೊಂಡಿದ್ದೇವೆ. ಪಂಚ ಪೀಠಗಳ ಪರಂಪರೆಯನು ಅವಲೋಕಿಸಿದರೆ ಈ ಮಠಗಳು ತಮ್ಮ ತಮ್ಮ ಮೂಲ ಪೀಠದ ಶಾಖೆಯಾಗಿದ್ದುಕೊಂಡು ಗ್ರಾಮ ಮಟ್ಟದಲ್ಲಿ ಜನರಿಗೆ ಧಾರ್ಮಿಕ ಸಂಸ್ಕಾರಗಳನ್ನು ಕೊಡುತ್ತ, ಶಿವಸಂದೇಶವನ್ನು ಸಾರುತ್ತ ಬಂದಿ ರುವುದು ನಮಗೆ ತಿಳಿಯುತ್ತದೆ. ಈ ಮಠಗಳ ಮಠಾಧಿಕಾರಿಗಳಿಗೆ "ಪಟ್ಟಾಧ್ಯಕ್ಷರು" ಅಥವಾ "ಪಟ್ಟದ್ದೇವರು" ಎಂಬುದಾಗಿ ಕರೆಯುತ್ತಾರೆ. ಪಂಚಾಚಾರ್ಯರ ಪರಂಪರೆಗೆ ಸಂಬಂಧಪಟ್ಟಿರುವ ಕಾರಣದಿಂದ ಇವರಿಗೆ ಶಿವಾಚಾರ್ಯರೆಂತಲೂ ಕರೆಯುತ್ತಾರೆ. ಈ ಹಿರೇಮಠಗಳು ಯಾವ ಕಾಲ ದಲ್ಲಿ ಸ್ಥಾಪಿಸಲ್ಪಟ್ಟವು ಎಂಬುದನ್ನು ನಿರ್ಧರಿಸುವುದು ಬಲು ಕಷ್ಟ ಸಾಧ್ಯ. ಈ ವಿಷಯವು ಇತಿಹಾಸ ಸಂಶೋಧನೆಗೆ ಒಳಪಡಬೇಕಾದ ವಿಷಯವಾಗಿ ರುತ್ತದೆ. ಹಲವಾರು ಸಂಶೋಧನ ಗ್ರಂಥಗಳನ್ನು ರಚಿಸಿ ವೀರಶೈವ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿರುವ ಡಾ. ಜ.

ಚ. ನಿ.ಯವರು ಹೇಳಿರುವಂತೆ ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಶ್ರೀ ಜಗದ್ಗುರು ಆದಿ ರೇಣುಕರಿಂದ ಮಠಗಳ ನಿರ್ಮಾಣ ಮೊದಲಾಯಿತು.

## ಹಂಚಿನಾಳ ಹಿರೇಮಠದ ಶ್ರೀ ಗುರು ಪರಂಪರೆ

ಇದುವರೆಗೆ ಧರ್ಮ ಭೂಮಿ, ಧರ್ಮಗಳು ಮತ್ತು ನಮ್ಮ ಸಂವಿಧಾನ, ಪಂಚ ಪೀಠಗಳ ಪರಂಪರೆ, ಧರ್ಮದ ಮೂಲ ಸಿದ್ಧಾಂತ, ಅಷ್ಟಾವರಣಗಳು, ಪಂಚಾಚಾರಗಳು, ಷಟ್‌ಸ್ಥಲ ಮಾರ್ಗ ಮತ್ತು ಹಿರೇಮಠಗಳನ್ನು ಕುರಿತು ಸಾಮಾನ್ಯ ಮಾಹಿತಿ, ಇವೇ ಮೊದಲಾದ ವಿಷಯಗಳನ್ನು ಈ ಪೀಠಿಕಾ ಭಾಗದಲ್ಲಿ ತಿಳಿದುಕೊಂಡದ್ದಾಯಿತು. ಈ ವಿಷಯಗಳನ್ನು ಧರ್ಮ ಮಾರ್ಗ ದಲ್ಲಿ ನಡೆಯಲು ಇಚ್ಛಿಸುವ ಎಲ್ಲ ಸದ್ಭಕ್ತರು ಮತ್ತು ಶ್ರೀ ಸಾಮಾನ್ಯರು ತಿಳಿದಿರಲೇಬೇಕು. ಜೀವನ ನಿರ್ವಹಣೆಗೆ ಶಿವಭಕ್ತಿಯು ಎಷ್ಟು ಅವಶ್ಯ ವಿರುವುದೋ ಅಷ್ಟೇ ಶಿವಜ್ಞಾನವೂ ಅವಶ್ಯವಿರುವುದು. ಈ ಆಧುನಿಕ ಯುಗದಲ್ಲಿ ವಿಜ್ಞಾನ, ಸಮಾಜ ಜ್ಞಾನ, ಅರ್ಥಶಾಸ್ತ್ರ, ರಾಜಕೀಯ ಜ್ಞಾನ ಮುಂತಾದ ಹಲವಾರು ಜ್ಞಾನಗಳನ್ನು ಸಂಪಾದಿಸಿಕೊಂಡು ಅನೇಕ ಪದವಿ ಗಳನ್ನು ಪಡೆದುಕೊಂಡು ಸುಶಿಕ್ಷಿತರೆನಿಸಿಕೊಳ್ಳುವ ನಾವುಗಳು "ಶಿವಜ್ಞಾನವೇ ನಿಜವಾದ ಜ್ಞಾನ" ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ. ಶಿವಜ್ಞಾನದ ಕಾರಣದಿಂದಾಗಿಯೇ ಈ ಭರತ ಭೂಮಿಯು ಧರ್ಮಭೂಮಿ ಎನಿಸಿಕೊಂಡಿ ರುವುದು. ಶಿವಜ್ಞಾನವು ವಿಶಾಲವಾದ ಸಾಗರವಿದ್ದಂತೆ. ಅದು ಎಲ್ಲ ಬಗೆಯ ಜ್ಞಾನಗಳನ್ನು ಒಳಗೊಂಡಿರುತ್ತದೆ. ಜನ ಸಾಮಾನ್ಯರಾಗಿರುವ ನಮಗೆ ಸಂಪೂರ್ಣ ಶಿವಜ್ಞಾನವನ್ನು ಸಂಗ್ರಹಿಸುವುದು ಸಾಧ್ಯವಾಗುವದಿಲ್ಲ. ನಮ್ಮ ಪೂರ್ವಜರು ನಮಗಾಗಿ ಶಿವಜ್ಞಾನ ಸಾರವನ್ನೊಳಗೊಂಡಿರುವ ಶಿವಸಿದ್ಧಾಂತ ವನ್ನು, ಅಷ್ಟಾವರಣಗಳನ್ನು, ಮತ್ತು ಪಂಚಾಚಾರಗಳನ್ನು ಬೋಧಿಸಿ ಷಟ್‌ಸ್ಥಲ ಮಾರ್ಗವನ್ನು ತೋರಿಸಿರುವರು. ಪೂರ್ವಜರ ಮೇಲೆ ಭಕ್ತಿ ಗೌರವಗಳನ್ನಿರಿಸಿ ಅವರು ತೋರಿಸಿದ ಮಾರ್ಗದಲ್ಲಿ ನಡೆಯುವುದರಿಂದ ನಮ್ಮ ಬಾಳು ಬಂಗಾರವಾಗುತ್ತದೆ. ಆ ಕಾರಣದಿಂದಾಗಿಯೇ ಶಿವಧರ್ಮಕ್ಕೆ ಸಂಬಂಧಿಸಿದ ಮುಖ್ಯ ವಿಷಯಗಳನ್ನು ಅನೇಕ ಧರ್ಮಗ್ರಂಥಗಳಿಂದ ತಿಳಿದು ಕೊಂಡು ಸಂಕ್ಷಿಪ್ತವಾದ ರೂಪದಲ್ಲಿ, ಜನ ಸಾಮಾನ್ಯರಿಗೆ ತಿಳಿಯುವ ರೀತಿ

ಯಲ್ಲಿ ಈ ಪೀಠಿಕಾ ಭಾಗದಲ್ಲಿ ಅಳವಡಿಸಲಾಗಿದೆ. ಆದರೆ ಹಂಚಿನಾಳ ಶ್ರೀ ಹಿರೇಮಠದ ಸದ್ಭಕ್ತರಿಗೆ ಶಿವಜ್ಞಾನವನ್ನು ತಲುಪಿಸಬೇಕೆಂಬುದೇ ಈ ಪುಸ್ತಕದ ಮುಖ್ಯ ಉದ್ದೇಶವಲ್ಲ. ಬೆಳಗಾಂವ ಜಿಲ್ಲೆಯ ಸವದತ್ತಿ ತಾಲೂಕಿನ ದಕ್ಷಿಣದ ಅಂಚಿನಲ್ಲಿರುವ ಹಂಚಿನಾಳ ಗ್ರಾಮದಲ್ಲಿಯ ಹಿರಿಯ ಮಠದ ಶ್ರೀ ಗುರು ಪರಂಪರೆಯನ್ನು ಕುರಿತು ಸಂಕ್ಷಿಪ್ತ ಪರಿಚಯವನ್ನು ಮಾಡಿ ಕೊಡುವುದೇ ಈ ಚಿಕ್ಕ ಪುಸ್ತಕದ ಮುಖ್ಯ ಉದ್ದೇಶವಾಗಿರುವುದು.

ಭಾರತ ದೇಶವು ಅತ್ಯಂತ ಪ್ರಾಚೀನ ಇತಿಹಾಸವನ್ನು ಹೊಂದಿರುವ ಜಗತ್ತಿನ ಕೆಲವೇ ಕೆಲವು ರಾಷ್ಟ್ರಗಳಲ್ಲಿ ಒಂದಾಗಿರುವುದು ಎಂಬುದನ್ನು ನಾವು ಬಲು ಹೆಮ್ಮೆಯಿಂದ ಹೇಳುತ್ತೇವೆ. ಆದರೂ ಸಹಿತ ಈ ದೇಶದ ಪ್ರಾಚೀನ ಇತಿಹಾಸದ ಕುರುಹುಗಳನ್ನು ರಕ್ಷಿಸುವುದರಲ್ಲಿಯೂ ಮತ್ತು ಇತಿಹಾಸವನ್ನು ಕ್ರಮಬದ್ಧವಾಗಿ ಬರೆದಿಡುವಲ್ಲಿಯೂ ಭಾರತೀಯರಾದ ನಾವು ಬಹಳಷ್ಟು ಅನಾಸಕ್ತಿಯನ್ನು ತೋರಿದ್ದೇವೆ, ಎಂಬುದು ಇಂದಿನ ಇತಿಹಾಸಕಾರರೇ ಒಪ್ಪಿಕೊಂಡಿರುವ ನಿಜ ಸಂಗತಿಯಾಗಿದೆ. ಅದೇ ರೀತಿಯಾಗಿ ಈ ದೇಶದಲ್ಲಿ ರುವ ವೀರಶೈವ ಪಂಚಪೀಠಗಳು ಅತ್ಯಂತ ಪುರಾತನ ಪರಂಪರೆಯನ್ನು ಹೊಂದಿದ್ದರೂ ಸಹಿತ ಆ ಪರಂಪರೆಯಲ್ಲಿ ಆಗಿ ಹೋದ ಆಚಾರ್ಯರೆಲ್ಲರ ಜೀವನ ಚರಿತ್ರೆ ಹಾಗೂ ಅವರು ಸಾಧಿಸಿದ ಮಹತ್ಕಾರ್ಯಗಳನ್ನು ಬರೆದಿಡುವ ಪದ್ಧತಿಯು ಅತಿ ಪ್ರಾಚೀನ ಕಾಲದಿಂದ ಅವ್ಯಾಹತವಾಗಿ ಸಾಗಿಬಾರದ್ದರಿಂದ ಆ ಪರಂಪರೆಯನ್ನು ಕುರಿತು ಬರೆಯಲು ಇಚ್ಛಿಸುವ ಇಂದಿನ ಲೇಖಕರು ಬಹಳಷ್ಟು ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಇದೇ ರೀತಿ ಸವದತ್ತಿ ತಾಲೂಕಿನ ಹಂಚಿನಾಳ ಶ್ರೀ ಹಿರೇಮಠದ ಇತಿಹಾಸವನ್ನು ಸಂಗ್ರಹಿಸುವಾ ಗಲೂ ಸಹಿತ ಇಂತಹದೇ ಪರಿಸ್ಥಿತಿಯು ಉದ್ಭವಿಸುತ್ತದೆ.

ಸಿಂಧೂ ನದಿ ತೀರದಲ್ಲಿಯ ಹರಪ್ಪಾ ಮತ್ತು ಮೊಹೆಂಜೋದಾರೋಗಳ ಉತ್ಖನನದ ಕಾಲದಲ್ಲಿ ಅಲ್ಲಿ ದೊರೆತ ಪುರಾತನ ಅವಶೇಷಗಳು ಭಾರತ ದೇಶದ ಪ್ರಾಚೀನ ಕಾಲದ ಇತಿಹಾಸದ ಮೇಲೆ ಹೆಚ್ಚು ಬೆಳಕನ್ನು ಬೀರಿದವು. ಅದೇ ರೀತಿಯಲ್ಲಿ ನಮಗಿಂದು ದೊರೆತಿರುವ ಹಂಚಿನಾಳ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಕಾಗದ, ಪುಸ್ತಕಗಳ ಚಿಕ್ಕ ಗಂಟೊಂದು ಈ ಮಠದ ಇತಿ

ಹಾಸದ ಮೇಲೆ ಹೆಚ್ಚು ಬೆಳಕನ್ನು ಬೀರುತ್ತಲಿದೆ. ನಮಗಿಂದು ಹಂಚಿನಾಳ ಶ್ರೀ ಹಿರೇಮಠದ ಪ್ರಾಚೀನ ಇತಿಹಾಸವು ಸ್ಪಷ್ಟವಾದ ರೂಪದಲ್ಲಿ ದೊರೆಯುವದಿಲ್ಲವಾದರೂ ಸಹಿತ ಸುಮಾರು ಕ್ರಿ.ಶ. ೧೬೭೫ ನೇ ಇಸ್ವಿಯ ನಂತರದ ಈ ಮಠದ ಅಲ್ಪಸ್ವಲ್ಪ ಇತಿಹಾಸವು ಈ ಗಂಟಿನಲ್ಲಿ ದೊರೆಯುತ್ತದೆ. ಈ ಪುಸ್ತಕದ ಇನ್ನು ಮುಂದಿನ ಭಾಗದಲ್ಲಿ ಹಂಚಿನಾಳ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಐತಿಹಾಸಿಕ ಮಾಹಿತಿಯನ್ನು ಕ್ರಮಬದ್ಧವಾದ ರೀತಿಯಲ್ಲಿ ನಿರೂಪಿಸಲು ಪ್ರಯತ್ನಿಸಲಾಗಿದೆ.



(೨)

# ಹಂಚಿನಾಳದ ಶ್ರೀ ಹಿರೇಮಠ

**ಹಂಚಿನಾಳ ಗ್ರಾಮ :**

ಕರ್ನಾಟಕದಲ್ಲಿ ಅತ್ಯಂತ ಖ್ಯಾತಿಯನ್ನು ಗಳಿಸಿರುವ ಬೆಳಗಾಂವ ಜಿಲ್ಲೆಯು ಕನ್ನಡಾಂಬೆಯ ಹೊನ್ನಗಣಿಯಲ್ಲಿಯ ಅನರ್ಘ್ಯ ರತ್ನದಂತೆ ಸುಂದರ ವಾಗಿ ಸಕಲ ವೈಭವಗಳಿಂದ ಕಂಗೊಳಿಸುತ್ತಿದೆ. ಕನ್ನಡ ನಾಡಿನ ಉತ್ತರ ಗಡಿಯಲ್ಲಿರುವ ಬೆಳಗಾಂವ ಜಿಲ್ಲೆಯು ನಿಸರ್ಗದತ್ತವಾದ ಸೌಂದರ್ಯದಿಂದ ಕೂಡಿದೆ. ರಮಣೀಯವಾದ ನೆಲ ಜಲಗಳಿಂದಲೂ, ಪವಿತ್ರವಾದ ಪುಣ್ಯ-ಕ್ಷೇತ್ರಗಳಿಂದಲೂ, ವಾಣಿಜ್ಯ ಉದ್ದಿಮೆಗಳಿಂದಲೂ ಮತ್ತು ವಿಪುಲವಾದ ಮಳೆ ಬೆಳೆಗಳಿಂದಲೂ ಕೂಡಿಕೊಂಡು ಸಮೃದ್ಧವಾಗಿದೆ. ಈ ಬೆಳಗಾಂವ ಜಿಲ್ಲೆಯು ಮೊದಲಿನಿಂದಲೂ ಬಹುಮುಖ ಖ್ಯಾತಿಯನ್ನು ಪಡೆದಿದೆ. ಅತ್ಯಂತ ಪ್ರಾಚೀನ ಇತಿಹಾಸವನ್ನು ಹೊಂದಿರುವ 'ಏಳುಕೊಳ್ಳದ ಎಲ್ಲಮ್ಮನ ಪುಣ್ಯ ಕ್ಷೇತ್ರ', 'ಶ್ರೀ ಕ್ಷೇತ್ರ ಸೊಗಲ' ಮುಂತಾದ ಪುಣ್ಯ ಕ್ಷೇತ್ರಗಳು ಈ ಜಿಲ್ಲೆ-ಯಲ್ಲಿ ಇರುವವು. ಇದೇ ಜಿಲ್ಲೆಯ ಸುಗಂಧವರ್ತಿ (ಸವದತ್ತಿ) ಮತ್ತು ವೇಣುಗ್ರಾಮ (ಬೆಳಗಾಂವ) ಪಟ್ಟಣಗಳು ತಮ್ಮ ಇತಿಹಾಸ ಕಾಲದಲ್ಲಿ ರಟ್ಟರ ರಾಜಧಾನಿಗಳಾಗಿ ಮೆರೆದಿವೆ. ಹದಿನೇಳನೆ ಶತಮಾನದ ಉತ್ತರಾ-ರ್ಧದಲ್ಲಿ ಛತ್ರಪತಿ ಶಿವಾಜಿಯೊಡನೆ ಹೋರಾಡಿದ ಬೆಳವಡಿ ಮಲ್ಲಮ್ಮ ಮತ್ತು ಹತ್ತೊಂಭತ್ತನೆ ಶತಮಾನದ ಪೂರ್ವಾರ್ಧದಲ್ಲಿ ಬ್ರಿಟಿಷರೊಡನೆ ಹೋರಾಡಿದ ಕಿತ್ತೂರ ರಾಣಿ ಚನ್ನಮ್ಮ ಇವರುಗಳು ಇದೇ ಜಿಲ್ಲೆಯ ವೀರ ಮಹಿಳೆಯರು. ಅಥಣಿಯ ಶಿವಯೋಗಿಗಳು, ಅರಭಾವಿಯ ದುರದುಂಡೀಶ್ವರರು, ಮುರ-ಗೋಡದ ಮಹಾಂತ ಶಿವಯೋಗಿಗಳು, ಸವದತ್ತಿ ಕಲ್ಮಠದ ಶ್ರೀ ಕುಮಾರ ಸ್ವಾಮಿಗಳು, ಹೂಲಿ ಹಿರೇಮಠದ ಶ್ರೀ ನೀಲಕಂಠ ಶಿವಾಚಾರ್ಯ ಸ್ವಾಮಿ ಗಳು ಹಾಗೂ ಸಂಬಯ್ಯನ ಮಠದ ಶ್ರೀ ಬಾಲಲೀಲಾ ಸಂಗಮೇಶ್ವರ ಶಿವಾ ಚಾರ್ಯ ಸ್ವಾಮಿಗಳು, ಅವರಾದಿಯ ಶ್ರೀ ಫಲಹಾರ ಶಿವಯೋಗೀಶ್ವರ

ಸ್ವಾಮಿಗಳು, ತಪೋವನದ ತಪಸ್ವಿ ಶ್ರೀ ಕುಮಾರ ಸ್ವಾಮಿಗಳು (ಇವರು ಬೆಳಗಾಂವ ಜಿಲ್ಲೆಯ ಹುಣಸೀಕಟ್ಟಿ ಗ್ರಾಮದವರು.) ಮತ್ತು ಮುರಗೋಡ ಗುರ್ಲಹೊಸೂರಿನ ಶ್ರೀ ಶಿವ ಚಿದಂಬರೇಶ್ವರರಂತಹ ಅನೇಕ ಮಹಾ ಮಹಿಮರುಗಳನ್ನು ಹೆತ್ತು ಹೊತ್ತು ಅವರುಗಳ ಲೀಲಾಭೂಮಿ ಎನಿಸಿದ ಈ ಬೆಳಗಾಂವ ಜಿಲ್ಲೆಯಲ್ಲಿ ಸವದತ್ತಿ ತಾಲೂಕಿನಲ್ಲಿರುವ ಎಲ್ಲಮ್ಮನ ಗುಡ್ಡದ ಆಗ್ನೇಯ ದಿಕ್ಕಿನಲ್ಲಿ ಅಲ್ಲಿಂದ ಹದಿನೈದು ಕಿಲೋ ಮೀಟರ ಅಂತರದ ಮೇಲೆ **"ಹಂಚಿನಾಳ"** ಎಂಬ ಒಂದು ಗ್ರಾಮವಿರುವದು.

ಹಂಚಿನಾಳ ಗ್ರಾಮವು ಐತಿಹಾಸಿಕ ಸ್ಥಳವೇನೂ ಅಲ್ಲ. ಆದರೂ ಸಹಿತ ಈ ಗ್ರಾಮವು ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿರುವುದು. ಈ ಗ್ರಾಮವು ಪ್ರಾಚೀನ ಕಾಲದಿಂದಲೂ ಒಳ್ಳೆಯ ಧಾರ್ಮಿಕ ಹಿನ್ನೆಲೆಯನ್ನು ಪಡೆದುಕೊಂಡು ಬಂದಿದೆ. ವೈರಾಗ್ಯ ಮೂರ್ತಿಗಳಾಗಿ ಕಂಗೊಳಿಸಿದ ಶಿವಾಚಾರ್ಯರುಗಳ ಪೂಜ್ಯ ಪರಂಪರೆಯನ್ನು ಈ ಗ್ರಾಮದ ಶ್ರೀ ಹಿರೇಮಠ ಹೊಂದಿದೆ. ಈ ಹಂಚಿನಾಳದ ನೆಲವು ಶಿವಾಚಾರ್ಯರುಗಳ ಪಾದಸ್ಪರ್ಶದಿಂದ ಪಾವನವಾಗಿದೆ. ಶಿವಾಚಾರ್ಯರುಗಳಿಂದ ಮಾರ್ಗದರ್ಶನ ಪಡೆಯುವ ಮತ್ತು ಅವರ ಸೇವೆ ಮಾಡುವ ಮಹಾಭಾಗ್ಯವನ್ನು ಹಂಚಿನಾಳ ಗ್ರಾಮದ ಪೂರ್ವಜರು ಪಡೆದಿದ್ದರು.

ಹಂಚಿನಾಳ ಗ್ರಾಮದ ಪೂರ್ವಜರ ಪುಣ್ಯದ ಫಲವೇನೋ ಎಂಬಂತೆ ನವಿಲು ತೀರ್ಥದ ಮುಖಾಂತರ ಹಾಯ್ದು ಉತ್ತರ ದಿಕ್ಕಿಗೆ ಚಲಿಸುತ್ತಿದ್ದ ಮಲಪ ಹಾರಿಯು ಭಾರತ ಸರಕಾರದ ನೀರಾವರಿ ಯೋಜನೆಯ ಫಲವಾಗಿ ದಕ್ಷಿಣಾಭಿಮುಖವಾಗಿ ಚಲಿಸುತ್ತ ಶ್ರೀ ಎಲ್ಲಮ್ಮ ದೇವಿಯ ಪಾದಗಳಡಿಯಲ್ಲಿ ಹಾಯ್ದು ಗುಡ್ಡವನ್ನು ದಾಟಿಕೊಂಡು ಬಂದು ಹಂಚಿನಾಳ ಗ್ರಾಮದ ಭೂಮಿಗಳಿಗೆಲ್ಲ ನೀರುಣಿಸುತ್ತಿರುವಳು. ಇದರಿಂದಾಗಿ ಈ ಗ್ರಾಮದ ರೈತರ ಜೀವನ ಮಟ್ಟವು ಮೊದಲಿಗಿಂತಲೂ ಉತ್ತಮಗೊಂಡಿರುವುದು. ಮೊದಲು ಹಂಚಿನಾಳ ಗ್ರಾಮದ ಬಡಜನರು ಸುಗ್ಗಿಯ ಸಮಯದಲ್ಲಿ ಉದ್ಯೋಗವನ್ನು ಹುಡುಕಿ-ಕೊಂಡು ಪರ ಊರುಗಳಿಗೆ ಹೋಗುತ್ತಿದ್ದರು. ಆದರೆ ಈಗ ಹಂಚಿನಾಳವೇ ಪರಊರಿನ ಹಲವಾರು ಜನರಿಗೆ ಉದ್ಯೋಗ ಮತ್ತು ಆಶ್ರಯವನ್ನು ನೀಡು-ತ್ತಿರುವುದು.

ಈ ಹಂಚಿನಾಳ ಗ್ರಾಮದಲ್ಲಿ ಇರುವ ಶ್ರೀ ಹಿರೇಮಠವು ಪ್ರಾಚೀನ ಪರಂಪರೆಯನ್ನು ಹೊಂದಿದೆ. ಇದು ಪಂಚಪೀಠಗಳಲ್ಲೊಂದಾದ ಶ್ರೀ ಕಾಶೀ ಜ್ಞಾನ ಪೀಠ ಪರಂಪರೆಯಲ್ಲಿ ನಡೆದು ಬಂದಿರುವ ಮಠ. ಈ ಗ್ರಾಮದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ದೇವಸ್ಥಾನವು ಇಲ್ಲಿಯ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಪ್ರಾಚೀನ ಶಿವಾಲಯವು. ಪಂಚಪೀಠಗಳ ಜಗದ್ಗುರುಗಳನ್ನೊಳಗೊಂಡು ಪರಊರಿನ ಅನೇಕ ಶಿವಾಚಾರ್ಯರು ಮತ್ತು ಮಠಾಧೀಶರುಗಳು ಹಂಚಿನಾಳ ಶ್ರೀ ಹಿರೇಮಠಕ್ಕೆ ಆಗಮಿಸಿದ ಸಂಗತಿಗಳನ್ನು ಸೂಚಿಸುವ ದಾಖಲೆಗಳುಂಟು. ಶ್ರೀಶೈಲ ಪೀಠದ ಜಗದ್ಗುರುಗಳು, ಉಜ್ಜಯಿನಿ ಪೀಠದ ಜಗದ್ಗುರುಗಳು, ಗಲಗಲಿ ಹಿರೇಮಠದ ಪಟ್ಟಾಧ್ಯಕ್ಷರು, ಶಿರಕೋಳ ಹಿರೇಮಠದ ಪಟ್ಟಾಧ್ಯಕ್ಷರು ಬಿಡಸೂರು ಹಿರೇಮಠದ ಪಟ್ಟಾಧ್ಯಕ್ಷರು, ನವಲಗುಂದ ಗವಿ ಮಠದ ಮಠಾಧೀಶರು, ಹೂಲಿ ಸಂಬಯ್ಯನ ಮಠದ ಲಿಂಗೈಕ್ಯ ಶ್ರೀ ಷ ಬ್ರ. ಬಾಲಲೀಲಾ ಸಂಗಮೇಶ್ವರ ಶಿವಾಚಾರ್ಯರು, ಮುಂತಾದ ಅನೇಕ ಮಹಾ ಪುರುಷರು ಹಂಚಿನಾಳ ಶ್ರೀ ಹಿರೇಮಠಕ್ಕೆ ಆಗಮಿಸಿರುವುದನ್ನು ಸೂಚಿಸುವ ದಾಖಲೆಗಳುಂಟು.

ಅವರಾದಿಯ ಶ್ರೀ ಫಲಾಹಾರೇಶ್ವರ ಮಠದ ಸ್ವಾಮಿಗಳು ಮೊದಲ ಬಾರಿಗೆ ಈ ಹಂಚಿನಾಳ ಗ್ರಾಮಕ್ಕೆ ಆಗಮಿಸಿದಾಗ ಅವರು ಇಲ್ಲಿಯ ಗೌಡರ ಮನೆಯೊಂದನ್ನು ಗುರುದಕ್ಷಿಣೆಯ ರೂಪದಲ್ಲಿ ಕಾಣಿಕೆಯಾಗಿ ಪಡೆದುಕೊಂಡರೆಂಬುದಾಗಿಯೂ ಮತ್ತು ಅಲ್ಲಿ ಕಳೆದ ಸುಮಾರು ನಲವತ್ತು ವರ್ಷಗಳಿಂದ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಪುರಾಣ ಪುಣ್ಯ ಕಥೆಗಳನ್ನು ನಡೆಸುತ್ತಾ ಬಂದಿರುವರೆಂಬುದಾಗಿಯೂ ನಮಗಿಂದು ತಿಳಿದು ಬರುತ್ತದೆ. ಕ್ರಿ. ಶ. ೧೯೯೦ ರ ವರೆಗೆ ಅಲ್ಲಿ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಮಾತ್ರ ಪುರಾಣ ಪುಣ್ಯ ಕಥೆ-ಗಳಂತಹ ವಿಶೇಷವಾದ ಕಾರ್ಯಕ್ರಮಗಳು ನಡೆಯುತ್ತಿದ್ದವು. ಆ ಸ್ಥಳವನ್ನು ಸದಾವಕಾಲವು ಜಾಗೃತ ಸ್ಥಾನವನ್ನಾಗಿರಿಸಿಕೊಂಡು ಬರುವ ಉದ್ದೇಶದಿಂದ ಅವರಾದಿಯ ಶ್ರೀ ಫಲಹಾರೇಶ್ವರ ಮಠದ ಇಂದಿನ ಮಠಾಧೀಶರಾಗಿರುವ ಶ್ರೀ. ಮ ನಿ ಪ್ರ. ಮೃತ್ಯುಂಜಯ ಸ್ವಾಮಿಗಳು ಕ್ರಿ. ಶ ೧೯೯೦ನೇ ಇಸ್ವಿಯ ಬಸವ ಜಯಂತಿಯಿಂದ ಈಚೆಗೆ ಅಲ್ಲಿ ಶಿವಾನುಭವ ಕಾರ್ಯಕ್ರಮವನ್ನು ಪ್ರಾರಂಭಿಸಿರುವರು.

ಇದೇ ರೀತಿಯಾಗಿ ಸುಮಾರು ಕ್ರಿ. ಶ. ೧೯೩೬ನೇ ಇಸ್ವಿಯಲ್ಲಿ ಗದುಗಿನ ಲಿಂಗೈಕ್ಯ ಶ್ರೀ ಶಿವಾನಂದ ಸ್ವಾಮಿಗಳು ಹಂಚಿನಾಳಕ್ಕೆ ಆಗಮಿಸಿದ್ದರೆಂಬ ಸಂಗತಿಯು ತಿಳಿದು ಬರುತ್ತದೆ. ಅವರ ಅದ್ವೈತ ಸಿದ್ಧಾಂತದ ಪ್ರಭಾವಕ್ಕೊಳಗಾದ ಹಂಚಿನಾಳದ ಸದ್ಭಕ್ತರು ಹಂಚಿನಾಳದಲ್ಲಿ ಸುಮಾರು ಕ್ರಿ. ಶ. ೧೯೩೯ರಲ್ಲಿ ಅವರ ಹೆಸರಿನಿಂದ ಒಂದು ಮಠವನ್ನು ಕಟ್ಟಿರುವರು. ಅದುವೇ ಹಂಚಿನಾಳದಲ್ಲಿರುವ ಶ್ರೀ ಶಿವಾನಂದಮಠ. ಈ ಶಿವಾನಂದ ಮಠದಲ್ಲಿಯೂ ಸಹಿತ ಅನೇಕ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತಾ ಬಂದಿವೆ. ಈ ಸಂದರ್ಭದಲ್ಲಿ ವಿಜಾಪುರದ ಲಿಂಗೈಕ್ಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳನ್ನು ಕುರಿತು ತಿಳಿದುಕೊಳ್ಳುವುದು ಹೆಚ್ಚು ಸೂಕ್ತವೆನಿಸುತ್ತದೆ. ಲಿಂಗೈಕ್ಯ ಶ್ರೀ ಮಲ್ಲಿಕಾ-ರ್ಜುನ ಸ್ವಾಮಿಗಳು ಮೂಲತಃ ಹಂಚಿನಾಳ ಗ್ರಾಮದವರು. "ವೇದಾಂತ ಕೇಸರಿ" ಎಂದು ಪ್ರಸಿದ್ಧಿ ಪಡೆದ ಇವರು ಸಂಸಾರ ತ್ಯಾಗ ಮಾಡಿ ಗದುಗಿನ ಶ್ರೀ ಶಿವಾನಂದ ಸ್ವಾಮಿಗಳ ಶಿಷ್ಯರಾಗಿ ಸಂನ್ಯಾಸ ದೀಕ್ಷೆಯನ್ನು ಹೊಂದಿದರು. ವಿಜಾಪುರವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡ ಇವರು ಅಲ್ಲಿ "ಜ್ಞಾನ ಯೋಗಾಶ್ರಮ"ವನ್ನು ಸ್ಥಾಪಿಸಿರುವರು. ಅವರು ಪ್ರತಿಪಾದಿಸುವ ಸಿದ್ಧಾಂತ ಅದ್ವೈತ; ಆದರೆ ಅವರ ಸಾಧನೆ ಶಿವಯೋಗ.

ಶಿವನ ಅನುಗ್ರಹವು ಕಡಿಮೆಯಾಗಿ, ಶಿವಕರುಣೆಯಿಂದ ದೂರವಾಗಿ, ಹತನಾದೆನೆಂದು ಬಂದುಪಾದಕ್ಕೆರಗಿದ ಶ್ರೀ ಹನುವಂತನಿಗೆ (ಮಾರುತಿಗೆ) ಶ್ರೀ ವೀರಭದ್ರೇಶ್ವರನು ಶಿವಲಿಂಗ ದೀಕ್ಷೆಯನ್ನಿತ್ತು ಕಾಪಾಡಿದನು, ಎಂಬುದಾಗಿ ಶ್ರೀ ವೀರಭದ್ರೇಶ್ವರನ ಚರಿತ್ರೆಯಿಂದ ತಿಳಿದು ಬರುತ್ತದೆ. ಬಹುಶಃ ಈ ಐತಿಹಾಸಿಕ ಕಾರಣಕ್ಕಾಗಿಯೇ ಏನೋ ಹಲವು ಕಡೆಗಳಲ್ಲಿ ಶ್ರೀ ವೀರಭದ್ರೇಶ್ವರನ ಸನ್ನಿಧಿಯಲ್ಲಿಯೇ ಶ್ರೀ ಹನುಮಂತ ದೇವರ ಮೂರ್ತಿಯೂ ಸಹ ಸ್ಥಾಪಿಸಲ್ಪಟ್ಟಿರುವುದನ್ನು ನಾವು ಕಾಣುತ್ತೇವೆ. ಈ ಹಂಚಿನಾಳ ಗ್ರಾಮದಲ್ಲಿಯೂ ಸಹಿತ ಶ್ರೀ ವೀರಭದ್ರೇಶ್ವರ ಮತ್ತು ಹನುಮಂತ ದೇವರ ಮೂರ್ತಿಗಳು ಒಂದೇ ದೇವಾಲಯದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುತ್ತವೆ. ಪೂರ್ವ ದಿಕ್ಕಿಗೆ ಮುಖ ಮಾಡಿರುವ ಶ್ರೀ ವೀರಭದ್ರೇಶ್ವರನ ಮುಂದೆ ದಕ್ಷಿಣಕ್ಕೆ ಮುಖ ಮಾಡಿರುವ ಶ್ರೀ ಹನುಮಂತದೇವರ ಮೂರ್ತಿಯು ಸ್ಥಾಪಿಸಲ್ಪಟ್ಟಿದೆ. ಈ ಊರಿನಲ್ಲಿರುವ ಇನ್ನುಳಿದ ಪ್ರಮುಖ ದೇವಾಲಯಗಳೆಂದರೆ ಶ್ರೀ ಕಲ್ಮೇಶ್ವರ ದೇವಸ್ಥಾನ, ಶ್ರೀ ದ್ಯಾಮವ್ವನ ಗುಡಿ, ಶ್ರೀ ಹಿರೇಮಠದ ಪಟ್ಟಾಧ್ಯಕ್ಷರುಗಳ

ಗದ್ದಿಗೆ, ಶ್ರೀ ಬಸವಣ್ಣ ದೇವರ ಗುಡಿ, ಶ್ರೀ ಬೀರದೇವರ ಗುಡಿ, ಶ್ರೀ ಮರೆಮ್ಮನ ಗುಡಿ, ಮಸೀದಿ ಮತ್ತು ಸೈದರ ದೇವರ ಗುಡಿ, ಮುಂತಾದವುಗಳು. ಹಂಚಿನಾಳ ಗ್ರಾಮದಲ್ಲಿರುವ ಹಿಂದೂಗಳು ಮತ್ತು ಮುಸಲ್ಮಾನರು ಸಹೋದರ ಭಾವನೆ ಯಿಂದ ಒಟ್ಟಿಗೆ ಸೇರಿ ಪ್ರತಿವರ್ಷವೂ ಮೊಹರಂ ಆಚರಿಸುತ್ತಾ ಬಂದಿರುವರು. ಮೊಹರಂ ದಿವಸ ಊರಿನ ಮುಖಂಡರೆಲ್ಲರೂ ಒಟ್ಟಿಗೆ ಸೇರಿ ದೇವರನ್ನು ಎಬ್ಬಿಸುತ್ತಾರೆ ಮತ್ತು ಒಟ್ಟಿಗೆ ಸೇರಿ ದೇವರನ್ನು ಹೊಳೆಗೆ ಕಳುಹಿಸುತ್ತಾರೆ. ಈ ಸಂಪ್ರದಾಯವು ಇಲ್ಲಿಯ ಹಿಂದೂ ಮತ್ತು ಮುಸಲ್ಮಾನರಲ್ಲಿ ಬೆಳೆದು ಬಂದಿರುವ ಭಾವೈಕ್ಯತೆ ಮತ್ತು ಮತೀಯ ಸಾಮರಸ್ಯವನ್ನು ಸೂಚಿಸುತ್ತದೆ.

## ಶ್ರೀ ಸಿದ್ಧಲಿಂಗೇಶ್ವರ

ಶಿವನು ನಿರಾಕಾರನು. ಶಿವನಿಗೆ ಹಲವು ಹೆಸರುಗಳುಂಟು. ಈಶ್ವರ ಎಂಬುದು ಶಿವನಿಗಿರುವ ಹಲವು ಹೆಸರುಗಳಲ್ಲಿ ಒಂದು. ನಿರಾಕಾರನಾಗಿರುವ ಈಶ್ವರನು ಲಿಂಗರೂಪದಲ್ಲಿ ಪೂಜಿಸಲ್ಪಡುವನು. ತನ್ನ ಲೀಲಾವಿನೋದಕ್ಕಾಗಿ ತಾನೇ ಈ ವಿಶ್ವರೂಪವನ್ನು ತಾಳಿ ಸಿದ್ಧಲಿಂಗ ಸ್ವರೂಪಿಯಾಗಿರುವ ಈಶ್ವರನೇ ಶ್ರೀ ಸಿದ್ಧಲಿಂಗೇಶ್ವರನು. ಹಂಚಿನಾಳ ಗ್ರಾಮದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ದೇವಸ್ಥಾನದಲ್ಲಿ ಕಪ್ಪು ಕಂತೆಯಿಂದ ಕೂಡಿದ ಸ್ಥಾವರ ಲಿಂಗವು ಇರುತ್ತದೆ. ಐತಿಹಾಸಿಕವಾಗಿ ಲಿಂಗಪೂಜೆಯ ತವರು ಸ್ಥಾವರ ಪೂಜೆಯೇ ಆಗಿರುವುದು. ಅತ್ಯಂತ ಪೂರ್ವ ಕಾಲದಲ್ಲಿ ಭಾರತದಲ್ಲಿ ಲಿಂಗತ್ವದ ಬೀಜವನ್ನು ಬಿತ್ತಿ ಬೆಳೆದಾತನು ಶ್ರೀ ರುದ್ರದೇವನು ಎಂಬುದನ್ನು ನಾವೀಗಾಗಲೇ ತಿಳಿದು-ಕೊಂಡಿರುವೆವು. "ಬ್ರಹ್ಮಾಂಡವು ಪಿಂಡಾಂಡದಲ್ಲುಂಟು, ಪಿಂಡಾಂಡವು ನನ್ನಲ್ಲುಂಟು, ನಾನು ಬ್ರಹ್ಮಾಂಡದಲ್ಲುಂಟು" ಇದು ವಿಶ್ವದ ರಹಸ್ಯ. ಇದರ ಮರ್ಮವನ್ನು ಅರಿತ ಶಿವಾಚಾರ್ಯರು ಬ್ರಹ್ಮಾಂಡಮಯವಾದ ಲಿಂಗವನ್ನು ಅನುಸಂಧಾನಗೊಳಿಸಿ, ಅರ್ಚನೆಗೆ ದಾರಿ ಮಾಡಿದರು.

ಶ್ರೀ ಸಿದ್ಧಲಿಂಗೇಶ್ವರನನ್ನು ಸಂಪೂರ್ಣವಾಗಿ ಅರಿತುಕೊಳ್ಳುವುದಾಗಲೀ ಅಥವಾ ವಿವರಿಸುವುದಾಗಲೀ ಬಲು ಕಷ್ಟದ ಕೆಲಸ. ಸಿದ್ಧಲಿಂಗಸ್ವರೂಪಿಯಾಗಿ ರುವ ಶ್ರೀ ಗುರುವಿನ ಕೃಪೆಗೆ ಪಾತ್ರರಾಗದ ವಿನಃ ನಾವು ಶ್ರೀ ಸಿದ್ಧಲಿಂಗೇಶ್ವರ ನನ್ನು ತಿಳಿದುಕೊಳ್ಳಲಾರೆವು. "ಶಿವಪಥವನರಿವೊಡೆ ಗುರುಪಥವೇ ಮೊದಲು"

ಎಂಬ ಶರಣರ ನುಡಿಯನ್ನು ನಾವು ಮರೆಯಲಾಗದು. ಲಿಂಗದ ಅರ್ಥವನ್ನು ಮತ್ತು ಅದರ ಸ್ವರೂಪವನ್ನು ಕುರಿತು ಹಲವರು ಹಲವು ವಿಧದಲ್ಲಿ ವ್ಯಾಖ್ಯಾನಿಸಿರುವರು. ಲಿಂಗದ ಅರ್ಥವನ್ನು ಒಂದು ವಾಕ್ಯದಲ್ಲಿಯಾಗಲೀ ಅಥವಾ ಒಂದು ವಚನದಲ್ಲಿಯಾಗಲೀ ಹಿಡಿದಿಡುವುದು ಸಾಧ್ಯವಾಗಲಿಕ್ಕಿಲ್ಲ. ಲಿಂಗದ ಸಂಪೂರ್ಣ ಅರ್ಥವನ್ನು ವಿವರಿಸುವಲ್ಲಿ ಭಾಷೆಯೇ ವಿಫಲವಾಗಿಬಿಡುತ್ತದೆ. ಈ ಕಾರಣದಿಂದಾಗಿಯೇ ಲಿಂಗವನ್ನು ಕುರಿತು ಹೇಳಲ್ಪಟ್ಟಿರುವ ಹಲವು ವ್ಯಾಖ್ಯೆಗಳು, ಕಣ್ಣಿಲ್ಲದ ಕುರುಡರು, ಬೃಹದಾಕಾರವಾದ ಆನೆಯ ಒಂದೊಂದು ಭಾಗವನ್ನು ಮುಟ್ಟಿ ನೋಡಿ, ಆನೆಯ ಸಂಪೂರ್ಣ ಚಿತ್ರವನ್ನು ವಿವರಿಸುವ ಉದ್ದೇಶದಿಂದ, ನೀಡಿದ ಆನೆಯ ವ್ಯಾಖ್ಯೆಗಳಂತೆ ಕಂಡು ಬಂದರೆ ಆಶ್ಚರ್ಯ ಪಡಬೇಕಾಗಿಲ್ಲ. ಲಿಂಗದ ಅರ್ಥವನ್ನು ಮತ್ತು ಸ್ವರೂಪವನ್ನು ಕುರಿತು ಹೇಳಲ್ಪಟ್ಟಿರುವ ಹಲವು ಸುಂದರವಾದ ವ್ಯಾಖ್ಯೆಗಳನ್ನು ಮತ್ತು ವಚನಗಳನ್ನು ನಾವಿಲ್ಲಿ ತಿಳಿದುಕೊಳ್ಳಲು ಪ್ರಯತ್ನಿಸೋಣ.

ಲೀಯತೆ ಗಮ್ಯತೆ ಅಸ್ಮಿನ ಇತಿ ಲಿಂಗಃ ॥

ವಿಶ್ವವು ಚಿತ್–ಅಚಿತ್ ಮತ್ತು ಚೇತನ–ಜಡಗಳಿಂದ ಕೂಡಿಕೊಂಡಿರುತ್ತದೆ. ಚಿದಚಿದಾತ್ಮಕವಾದ ಈ ಸೃಷ್ಟಿಯು ಯಾವುದರಿಂದ ಹೊರಹೊಮ್ಮಿ ಯಾವುದರ ಸಹಾಯದಿಂದ ಬಾಳಿ ಬೆಳಗಿ ಯಾವುದರಲ್ಲಿ ಕೊನೆಗೆ ಅಡಗುವುದೋ ಅದುವೇ ಲಿಂಗವು.

ಲಿಂಗಕ್ಕೆ ಕಡೆ ಎಲ್ಲಿ ? ಲಿಂಗವಿಲ್ಲದೆಡೆ ಎಲ್ಲಿ ?
ಲಿಂಗದೊಳು ಜಗವು ಅಡಗಿಹುದು, ಲಿಂಗವನು ।
ಹಿಂಗಿದವರುಂಟೆ ? ಸರ್ವಜ್ಞ ॥

ಲಿಂಗಕ್ಕೆ ಕೊನೆ ಎಂಬುದೇ ಇಲ್ಲ, ಏಕೆಂದರೆ ಅದಕ್ಕೆ ಮೊದಲಿಲ್ಲ; ಯಾವುದಕ್ಕೆ ಆದಿ ಇದೆಯೋ ಅದಕ್ಕೆ ಅಂತ್ಯ ಇರಲೇಬೇಕು. ಆದರೆ ಆದಿ ಅಂತ್ಯಗಳಿಲ್ಲದ ಲಿಂಗವು ಅನಂತವಾಗಿರುವದು. ಲಿಂಗವಿಲ್ಲದಿರುವ ಸ್ಥಳವೇ ಇಲ್ಲ, ಏಕೆಂದರೆ ಲಿಂಗದಿಂದ ಸಂಕೇತಿಸಲ್ಪಡುವ ಆ ಪರಶಿವನು ಸರ್ವಾಂತರ್ಯಾಮಿಯೂ, ಸರ್ವಭರಿತನೂ ಆಗಿರುವನು. ವಿಶ್ವದಲ್ಲೆಲ್ಲ 'ಓತಪ್ರೋತವಾಗಿ ತುಂಬಿ ತುಳುಕುತ್ತಿರುವನು. ಅಂದಮೇಲೆ ಇಡೀ ವಿಶ್ವವನ್ನು ತನ್ನಲ್ಲಿಂಬಿಟ್ಟು

ಕೊಂಡು ಲಿಂಗವನು ಹಿಂಗಬಲ್ಲವರು ಯಾರಿರುವರು ? ಎಂಬುದಾಗಿ ಸರ್ವಜ್ಞ ಕವಿಯು ತನ್ನ ಒಂದು ವಚನದಲ್ಲಿ ಪ್ರಶ್ನೆ ಮಾಡಿರುವನು.

ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಲಿಂಗಬಾಹ್ಯಾತ್ ಪರಂ ನಾಸ್ತಿ ತಸ್ಮೈ ಲಿಂಗಾಯ ತೇ ನಮಃ ॥

ಸಚರಾಚರ ವಸ್ತುಗಳನ್ನೊಳಗೊಂಡು ಮೂರೂ ಲೋಕಗಳನ್ನು ಅರ್ಥಾತ್ ಈ ಜಗತ್ತನ್ನು ತನ್ನಲ್ಲಿ ಇಂಬಿಟ್ಟುಕೊಂಡಿರುವ ಲಿಂಗವು ಜಗದ್ರೂಪವಾಗಿದೆ, ವಿಶ್ವರೂಪವಾಗಿದೆ. ಅಂದಮೇಲೆ ಇಡೀ ವಿಶ್ವವನ್ನು ಹೊರಗಿಕ್ಕಿ ತಾನೊಂದೇ ಪ್ರತ್ಯೇಕವಾಗಿ ಅಸ್ತಿತ್ವದಲ್ಲಿರಬಲ್ಲಯಾವ ವಸ್ತುವೂ ಈ ಪ್ರಪಂಚದಲ್ಲಿಲ್ಲ, ಎಂಬುದಾಗಿ ಲಿಂಗದ ಸರ್ವವ್ಯಾಪಕತ್ವವು ಇಲ್ಲಿ ವಿವರಿಸಲ್ಪಟ್ಟಿದೆ.

ಅಮೂಲ್ಯನು ಅಪ್ರಮಾಣನು ಅಗೋಚರ ಲಿಂಗ;
ಅದಿ ಮಧ್ಯಾವಸಾನಗಳಿಲ್ಲದ ಸ್ವತಂತ್ರ ಲಿಂಗ;
ನಿತ್ಯ ನಿರ್ಮಳ ಲಿಂಗ;
ಅಯೋನಿ ಸಂಭವನಯ್ಯಾ, ನಮ್ಮ ಕೂಡಲ ಸಂಗಮ ದೇವರು.

ಎಂಬುದಾಗಿ ಬಸವಣ್ಣನವರು ಲಿಂಗದ ಸ್ವರೂಪವನ್ನು ವಿವರಿಸಿರುವರು. ಕೂಡಲ ಸಂಗಮೇಶ್ವರ ಲಿಂಗವು ಅಮೂಲ್ಯವಾದುದು. ಅದರ ಬೆಲೆ ಕಟ್ಟುವುದು ಸಾಧ್ಯವಿಲ್ಲ. ಅದನ್ನು ಯಾವುದೇ ಲೌಕಿಕ ಪ್ರಮಾಣಗಳಿಂದ ಸಾಧಿಸಿ ತೋರಿಸಲು ಸಾಧ್ಯವಿಲ್ಲ. ಅದು ಪಂಚೇಂದ್ರಿಯಗಳ ಅನುಭವಕ್ಕೆ ನಿಲುಕುವುದಿಲ್ಲ. ಅದು ಅಗೋಚರವಾಗಿರುವುದು. ಹುಟ್ಟು, ಬದುಕು, ಸಾವುಗಳಿಂದ ಮುಕ್ತವಾಗಿರುವ ಆ ಲಿಂಗವು ಸ್ವತಂತ್ರವಾಗಿರುವುದು. ಲಿಂಗಕ್ಕೆ ನಾಶವೆಂಬುದೇ ಇಲ್ಲ. ಅದು ನಿತ್ಯ. ಮಲತ್ರಯ ದೋಷರಹಿತವಾಗಿರುವ ಅದು ನಿತ್ಯ ನಿರ್ಮಲವಾಗಿರುವುದು. ನಮ್ಮ ಕೂಡಲ ಸಂಗಮೇಶ್ವರ ಲಿಂಗವು ತಾಯಿ ತಂದೆಗಳಲ್ಲಿ ಹುಟ್ಟಲ್ಲ, ಅದು ಅಯೋನಿ ಸಂಭವ.

ಲಕಾರವೇ ಶೂನ್ಯ, ಬಿಂದುವೇ ಲೀಲೆ, ಗಕಾರವೇ ಚಿತ್;
ಈ ತ್ರಿವಿಧದೊಳಗೆ ಲಿಂಗವೆಂಬ ಸಕೀಲ.
ಇದರ ಸಂಚವ ಬಲ್ಲಾತನೇ ಲಿಂಗಸಂಗಿ,
ಕೂಡಲ ಚೆನ್ನ ಸಂಗಮದೇವಾ.

ಜಡವಾದ ಪ್ರಕೃತಿ ಮತ್ತು ಚೇತನಾತ್ಮಕರಾದ ಜೀವರು ಸೃಷ್ಟಿಯ ಪೂರ್ವದಲ್ಲಿ ಶೂನ್ಯದಲ್ಲಡಗಿದ್ದು, ಸೃಷ್ಟಿಯಾದೊಡನೆ ಪರಶಿವನ ಲೀಲೆಗಾಗಿ ಕಟಿಬದ್ಧರಾಗಿ ತಮ್ಮ ಪಾತ್ರವನಾಡಿ ಆ ಲೀಲೆಗೊಂದು ಮೆರಗನ್ನು ತಂದು ಲೀಲೆ ತಪ್ಪಿದಡೆ ಮತ್ತೆ ಆ ಸ್ವಯಂಭುವಿನಲ್ಲಿ ಲೀನವಾಗುವರು. ಶಿವನು ಶೂನ್ಯವಾಚಕನಾಗಿದ್ದಾನೆ. ಹಾಗೆಯೇ ಶಕ್ತಿಯು ಜ್ಞಾನವಾಚಕವಾಗಿದೆ. ಶಿವ-ಶಕ್ತಿಯರ ಮಧ್ಯದಲ್ಲಿ ಎಂದರೆ ಶಿವನ ಸಂಕಲ್ಪ ಶಕ್ತಿಯ ಮುಖಾಂತರವಾಗಿ ರೂಪಗೊಂಡ ಈ ಸೃಷ್ಟಿಯು ಶಿವನಿಂದನ್ಯವಲ್ಲ. ಶಿವಶಕ್ತಿಯರಂತೆ ಸತ್ಯವಾಗಿ ಪರಿಣಮಿಸಿ ಇದು ಶಿವಲೀಲೆಯನ್ನು ಸ್ಫುಟಗೊಳಿಸುವದು. ಬಲು ವ್ಯಾಪಕವಾದ ಅರ್ಥವನ್ನು ಹೊಂದಿರುವ ಲಿಂಗವು ಶಿವ, ಶಕ್ತಿ ಮತ್ತು ಸೃಷ್ಟಿ ಈ ಮೂರರ ರಹಸ್ಯವನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿರುತ್ತದೆ. ಇದರ ಸಂಚನ್ನು ಬಲ್ಲಾತನೇ ಲಿಂಗಸಂಗಿಯಾಗಿರುವನು ಎಂಬುದಾಗಿ ಚೆನ್ನಬಸವಣ್ಣನವರು ತಮ್ಮ ಒಂದು ವಚನದಲ್ಲಿ ತಿಳಿಸಿರುವರು.

ವರಾಹೋ ವಿಷ್ಣುರ್ನಿಮಮಜ್ಜ ಭೂವನೌ
ಬ್ರಹ್ಮೋತ್ಪಪಾತ ದಿವಮಾಶು ಹಂಸ : ||

ವಿಷ್ಣು ವರಾಹ ರೂಪವನ್ನು ಮತ್ತು ಬ್ರಹ್ಮನು ಹಂಸರೂಪವನ್ನು ಧರಿಸಿ ಲಿಂಗಸ್ವರೂಪಿಯಾಗಿರುವ ಪರಮಾತ್ಮನನ್ನು ಹುಡುಕಲು ಪ್ರಯತ್ನಿಸಿದರು. ಎಷ್ಟು ಪ್ರಯತ್ನಿಸಿದರೂ. ಸಹಿತ ಪರಮಾತ್ಮನನ್ನು ಕಾಣುವುದು ಅವರಿಂದ ಸಾಧ್ಯವಾಗಲಿಲ್ಲ, ಎಂಬುದಾಗಿ " ಲಿಂಗಸೂತ್ರ " ದಲ್ಲಿ ಹೇಳಲ್ಪಟ್ಟಿದೆ.

ಜ್ಯೋತಿರ್ಮಯವಾದ ಯಾವ ಲಿಂಗವು ಪೂರ್ವದಲ್ಲಿ ವಿಷ್ಣು-ಬ್ರಹ್ಮರಿಂದಲೂ ಸಹ ತಿಳಿಯಲು ಅಸಾಧ್ಯವಾಗಿದ್ದಿತೋ ಆ ಲಿಂಗವು ಯಾವನಿಂದ ತಿಳಿಯಲು ಶಕ್ಯವು ? ಶ್ರೇಷ್ಠವೂ, ಪವಿತ್ರವೂ, ಆಣವಾದಿ ಮಲರಹಿತವೂ, ಬ್ರಹ್ಮಪದವಾಚ್ಯವೂ, ಸನಾತನವೂ, ಶಿವನಾಮಕವೂ, ಜ್ಞಾನಸ್ವರೂಪವೂ, ಸತ್ಸ್ವರೂಪವೂ, ಆನಂದ ಸ್ವರೂಪವೂ, ನಿರಂಕುಶವೂ, ಸರ್ವ ಲೋಕಗಗಳಿಗೂ ವೇದಗಳಿಗೂ ಕಾರಣೀಭೂತವೂ, ಮೂವತ್ತಾರು ತತ್ವಪೂರಿತವೂ, ಭವಸಾಗರ ತಾರಕವೂ, ಜ್ಯೋತಿರೂಪವು, ಯೋಗಿಗಳಿಗೂ ಸಹ ಕಾಣದಿ

ರುವಂಥದಾಗಿ ಸ್ವಸ್ವರೂಪಸ್ಥಿತವು ಆದ ಲಿಂಗವು ಈ ಲೋಕದಲ್ಲಿ ಮಹಾ ಗುರುವಿನ ಕೃಪೆಯಿಲ್ಲದೆ ಹೇಗೆ ತಿಳಿಯಲ್ಪಡುವುದು ? ಎಂಬುದಾಗಿ "ಸಿದ್ಧಾಂತ ಶಿಖಾಮಣಿ"ಯು ಪ್ರಶ್ನೆ ಮಾಡುತ್ತದೆ.

ಲಿಂಗದ ಅರ್ಥವನ್ನು, ಸ್ವರೂಪವನ್ನು ಮತ್ತು ಅದನ್ನು ತಿಳಿಯುವ ವಿಧಾನವನ್ನು ತಿಳಿಸುವ ಈ ಮೇಲಿನ ವಿವರಣೆಗಳನ್ನು ಗಮನಿಸಿದಾಗ, ಶ್ರೀ ಗುರುವಿನ ಕೃಪೆಗೆ ಪಾತ್ರರಾಗದ ವಿನಃ ನಮಗೆ ಲಿಂಗದ ಅರ್ಥವಾಗಲೀ ಅದರ ಸ್ವರೂಪವಾಗಲೀ ತಿಳಿಯುವುದಿಲ್ಲ ಮತ್ತು ಲಿಂಗಸ್ವರೂಪಿಯಾಗಿರುವ ಈಶ್ವರನನ್ನು ಕಾಣುವುದು ನಮ್ಮಿಂದ ಸಾಧ್ಯವಾಗುವುದಿಲ್ಲ ಎಂಬ ಅಂಶವು ಸ್ಪಷ್ಟವಾಗಿ ತಿಳಿದು ಬರುತ್ತದೆ. ಲಿಂಗಸ್ವರೂಪಿಯಾಗಿರುವ ಈಶ್ವರನನ್ನು ತಿಳಿದುಕೊಳ್ಳುವುದಕ್ಕಾಗಿ ನಮಗೆ ಸಿದ್ಧಲಿಂಗಸ್ವರೂಪಿಯಾಗಿರುವ ಶ್ರೀ ಗುರುವಿನ ಅವಶ್ಯಕತೆಯು ಇರುತ್ತದೆ. ಅಷ್ಟಾವರಣಗಳಲ್ಲಿ ಒಂದಾಗಿರುವ ಶ್ರೀ ಗುರುವಿನ ಅವಶ್ಯಕತೆಯು ಎಷ್ಟಿರುವುದೆಂಬುದು ನಮಗೆ ಇದರಿಂದ ತಿಳಿದುಬರುತ್ತದೆ. ಸಿದ್ಧಲಿಂಗ ಸ್ವರೂಪಿಯಾಗಿರುವ ಶ್ರೀಗುರುವು ಸಾಕ್ಷಾತ್ ಶ್ರೀ ಸಿದ್ಧಲಿಂಗೇಶ್ವರನನ್ನೇ ನಮ್ಮ ಕರಸ್ಥಲದಲ್ಲಿ ತಂದಿರಿಸಲು ಸಮರ್ಥನಾಗಿರುತ್ತಾನೆ. ಹಂಚಿನಾಳದ ಶ್ರೀ ಸಿದ್ಧಲಿಂಗೇಶ್ವರ ದೇವಸ್ಥಾನದಲ್ಲಿ ಸ್ಥಾವರಲಿಂಗ ಸ್ವರೂಪಿಯಾಗಿರುವ ಶ್ರೀ ಸಿದ್ಧಲಿಂಗೇಶ್ವರನನ್ನು ಪೂಜಿಸಿ, ಆತನ ಸನ್ನಿಧಿಯಲ್ಲಿಯೇ ಶ್ರೀ ಗುರುವಿನ ಹಸ್ತದಿಂದ, ಶ್ರೀ ಸಿದ್ಧಲಿಂಗೇಶ್ವರನ ಕುರುಹಾಗಿರುವ ಇಷ್ಟಲಿಂಗವನ್ನು ಕೊರಳಲ್ಲಿ ಕಟ್ಟಿಸಿಕೊಂಡು ಲಿಂಗದೀಕ್ಷೆ (ಅಯ್ಯಾಚಾರ) ಯನ್ನು ಪಡೆದುಕೊಳ್ಳುವ ಸಂಪ್ರದಾಯವು ಬಳಕೆಯಲ್ಲಿರುವುದು ಗಮನಾರ್ಹವಾಗಿದೆ.





ಸಿದ್ಧಲಿಂಗಸ್ವರೂಪಿಯಾಗಿರುವ ಶ್ರೀ ಗುರುವು ಶ್ರೀ ಸಿದ್ಧಲಿಂಗೇಶ್ವರನ ಕುರುಹಾಗಿರುವ ಇಷ್ಟಲಿಂಗವನ್ನು ಕರಸ್ಥಲದಲ್ಲಿ ತಂದಿರಿಸಿದಾಗ ಅದು

"ಕರಸ್ಥಲದ-ಜ್ಯೋತಿ" ಎನಿಸಿಕೊಳ್ಳುವುದು. ಶ್ರೀ ಸಿದ್ಧಲಿಂಗೇಶ್ವರನ ಕುರುಹಾಗಿ, ಶ್ರೀ ಗುರುವು ಕರುಣಿಸಿದ ಮಹಾಜ್ಯೋತಿಯನ್ನು ಕರಸ್ಥಲದಲ್ಲಿರಿಸಿಕೊಂಡು, ಅನಿಮಿಷ ದೃಷ್ಟಿಯಿಂದ ಅನುಸಂಧಾನಗೈಯ್ಯುತ್ತ ತ್ರಾಟಕ ಯೋಗವನ್ನು ಮಾಡಿದಾಗ, ಕರಸ್ಥಲದಲ್ಲಿರುವ ಮಹಾಜ್ಯೋತಿಯ ಮಧ್ಯದಲ್ಲಿ ಮತ್ತೊಂದು ಜ್ಯೋತಿಯು ಬೆಳಗುತ್ತಿರುವುದು ಕಾಣಿಸುತ್ತದೆ. ಶ್ರೀ ಸಿದ್ಧಲಿಂಗೇಶ್ವರನ ಕುರುಹಾಗಿ ಕರಸ್ಥಲದಲ್ಲಿ ಶೋಭಿಸುತ್ತಿರುವ ಇಷ್ಟಲಿಂಗದ ಅನುಸಂಧಾನದಲ್ಲಿ ತೊಡಗಿದಾಗ ಅದರ ಮಧ್ಯದಲ್ಲಿ ಕಾಣಿಸುವ ಚಿಜ್ಯೋತಿಯು "ಪ್ರಾಣಲಿಂಗದ ಚಿಜ್ಯೋತಿ" ಅಥವಾ "ಅರುಹಿನ ಕಳೆ" ಎನಿಸಿಕೊಳ್ಳುತ್ತದೆ. ಆ ಅರುಹಿನ ಕಳೆಯೇ ಇಷ್ಟಲಿಂಗವನ್ನು ಪೂಜಿಸುತ್ತಿರುವ ಜೀವಾತ್ಮವನ್ನು ಪ್ರತಿನಿಧಿಸುತ್ತದೆ. ಈ ಪ್ರಕಾರವಾಗಿ ಜೀವಾತ್ಮನು, ಸಿದ್ಧಲಿಂಗ ಸ್ವರೂಪಿಯಾಗಿರುವ ಶ್ರೀ ಗುರುವು ಬೋಧಿಸಿದ ಜ್ಞಾನದ ಬೆಳಕಿನಲ್ಲಿ ಆತನು ಕರುಣಿಸಿದ ಕರಸ್ಥಲದ ಮಹಾಜ್ಯೋತಿಯ ನಿಲುವಿನೊಳಗೆ ತನ್ನನ್ನು ಕಾಣುತ್ತಾನೆ. ತನ್ನೊಳಗೆ ಆ ಶ್ರೀ ಸಿದ್ಧಲಿಂಗೇಶ್ವರನು ಜ್ಯೋತಿ ರೂಪದಲ್ಲಿ ಬೆಳಗುತ್ತಿರುವದನ್ನು ಅನುಭವಿಸುತ್ತಾನೆ. ಇಷ್ಟೆ ಅಲ್ಲದೇ, ಆ ಜೀವಾತ್ಮನು, ಆ ಶ್ರೀ ಸಿದ್ಧಲಿಂಗೇಶ್ವರನ ಚಿದ್ಗರ್ಭದಲ್ಲಿರುವ ಶಿಶುವಿನಂತೆ ತಾನು ಅವನಲ್ಲಿ ಇಂಬಿಡಲ್ಪಟ್ಟಿರುವುದನ್ನು ಕಂಡು ಮೂಕವಿಸ್ಮಿತನಾಗಿ, ಮಾತು ಮೌನವಾಗಿ, ತನ್ನರುಹಿನಲ್ಲಿ ಬೆರೆತುಕೊಳ್ಳುತ್ತಾನೆ. ಈ ಪ್ರಕಾರವಾಗಿ ಕುರುಹಿನ ಸಹಾಯದಿಂದ ತನ್ನರುಹಿನಲ್ಲಿ ಬೆರೆತು ಸ್ವಸ್ವರೂಪವನ್ನು ಕಂಡುಕೊಳ್ಳುತ್ತಾನೆ. ಅಷ್ಟಾವರಣಗಳಿಂದ ಅಲಂಕೃತನಾಗಿ ಪಂಚಾಚಾರಗಳನ್ನು ಪಾಲಿಸುತ್ತಿರುವ ಜೀವಾತ್ಮನು, ಸ್ವಸ್ವರೂಪ ಜ್ಞಾನಿಯಾಗಿ ತನ್ನರುಹನ್ನು ಶ್ರೀ ಸಿದ್ಧಲಿಂಗೇಶ್ವರನ ಕುರುಹಿನಲ್ಲಿ ಸಮರಸಗೊಳಿಸಿ ಲಿಂಗಾಂಗ ಸಾಮರಸ್ಯವನ್ನು ಸಂಪಾದಿಸುತ್ತಾನೆ.

ಶ್ರೀ ಷಣ್ಮುಖ ಶಿವಯೋಗಿಗಳು ಇಷ್ಟಲಿಂಗದ ಪೂಜೆಯನ್ನು ಬಹು ಸುಂದರವಾಗಿ ತಮ್ಮ ಒಂದು ವಚನದಲ್ಲಿ ಈ ಕೆಳಗಿನಂತೆ ವರ್ಣಿಸಿರುವರು.

ಎನ್ನ ಕರಸ್ಥಲದ ಮಧ್ಯದಲ್ಲಿ ಪರಮ ನಿರಂಜನಹ
ಕುರುಹು ತೋರಿದ, ಆ ಕುರುಹಿನ ಮಧ್ಯದಲ್ಲಿ
ಅರುಹಿನ ಕಳೆಯ ತೋರಿದ,
ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ
ಬೆಳಗ ತೋರಿದ, ಆ ಬೆಳಗಿನ
ನಿಲುವಿನೊಳಗೆ ಎನ್ನ ತೋರಿದ,
ತನ್ನೊಳಗೆ ಎನ್ನನಿಂಬಿಟ್ಟುಕೊಂಡ,
ಮಹಾಗುರುವಿಗೆ ನಮೋ ನಮಃ
ಎನುತಿರ್ಪೆನಯ್ಯಾ ಅಖಂಡೇಶ್ವರಾ.

## ಲಿಂಗೈಕ್ಯ ಶ್ರೀ ಗುರು ಪಡದಪ್ಪಜ್ಜನವರು

"ಹಂಚಿನಾಳ ಹಿರೇಮಠ" ಎಂದೊಡನೆ ಲಿಂಗೈಕ್ಯ ಶ್ರೀಗುರು ಪಡದಪ್ಪಜ್ಜನವರ ಹೆಸರು ಮೊದಲು ಕೇಳಿಬರುತ್ತದೆ. ಮಹಾಮಹಿಮರಾದ ಶ್ರೀ ಗುರು ಪಡದಪ್ಪಜ್ಜನವರ ಪೂರ್ಣ ಹೆಸರು ಶ್ರೀ ಪ. ಬ್ರ. ಪಡದಯ್ಯ ( ಉರ್ಫ ಮಹಾದೇವ ) ಶಿವಾಚಾರ್ಯ ಸ್ವಾಮಿಗಳು. ಲಿಂಗೈಕ್ಯ ಶ್ರೀಗುರು ಪಡದಪ್ಪಜ್ಜನವರು ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರು.

ಲಿಂ. ಶ್ರೀ ಗುರು ಪಡದಪ್ಪಜ್ಜನವರನ್ನು ಕುರಿತು ಊರ ಜನರು ಹಲವಾರು ಸಂಗತಿಗಳನ್ನು ತಮ್ಮದೇ ಆದ ವಿಶಿಷ್ಟವಾದ ರೀತಿಯಲ್ಲಿ ವಿವರಿಸುತ್ತಾರೆ. ಅವರನ್ನು ಕುರಿತು ಕೆಲವರು ಭಜನೆ ಪದಗಳನ್ನು ರಚಿಸಿ ಹಾಡಿರುವರು. ಜನಪದ ಭಾಷೆಯಲ್ಲಿ ಇರುವ ಈ ಎಲ್ಲ ಸಂಗತಿಗಳನ್ನು ಒಂದೆಡೆಗೆ ಲಿಖಿತ ರೂಪದಲ್ಲಿ ಸಂಗ್ರಹಿಸುವ ಕಾರ್ಯವನ್ನು ಇದುವರೆಗೆ ಯಾರೂ ಕೈಕೊಂಡಿಲ್ಲ. ಶ್ರೀ ಗುರು ಪಡದಪ್ಪಜ್ಜನವರನ್ನು ಕುರಿತು ಬರೆಯುವ ಅಥವಾ ಅವರ ಚರಿತ್ರೆಯನ್ನು ರಚಿಸುವ ಸಾಮರ್ಥ್ಯವಾಗಲೀ ಅಥವಾ ಯೋಗ್ಯತೆಯಾಗಲೀ ನನ್ನಲ್ಲಿ ಇಲ್ಲ ಎಂಬುದನ್ನು ನಾನು ಮೊದಲೇ ತಿಳಿಸಿ ಬಿಡುತ್ತೇನೆ. ಅವರನ್ನು ಕುರಿತು ಬರೆಯಲು ತೊಡಗಿದರೆ ನಾವು ಬಹುದೊಡ್ಡ ಸಾಗರದ ಎಲ್ಲ ನೀರನ್ನು ಒಂದು ಚಿಕ್ಕ ಕೊಡದಲ್ಲಿ ಸಂಗ್ರಹಿಸಲು ಪ್ರಯತ್ನಿಸಿ

ದಂತಾಗುತ್ತದೆ ಎಂಬುದನ್ನು ನಾನು ಮನಗಂಡಿದ್ದೇನೆ. ಆದರೆ ಲಿಂ. ಶ್ರೀ ಗುರು ಪಡದಪ್ಪಜ್ಜನವರನ್ನು ಕುರಿತು ಮತ್ತು ಹಂಚಿನಾಳ ಶ್ರೀ ಹಿರೇಮಠ ವನ್ನು ಕುರಿತು ಈಗ ಲಭ್ಯವಿರುವ ಮಾಹಿತಿಗಳನ್ನು ಕ್ರೋಢೀಕರಿಸಿ, ಅವು ಗಳನ್ನು ಸುವ್ಯವಸ್ಥಿತವಾದ ರೀತಿಯಲ್ಲಿ ಜೋಡಿಸಿ ಒಂದು ವರದಿಯನ್ನು ತಯಾರಿಸಲು ಪ್ರಾಮಾಣಿಕ ಪ್ರಯತ್ನವನ್ನು ಮಾಡಿರುವೆನು ಎಂಬುದಾಗಿ ಮಾತ್ರ ನಾನಿಲ್ಲಿ ಹೇಳಬಲ್ಲೆ. ಲಿಂಗೈಕ್ಯ ಶ್ರೀ ಗುರು ಪಡದಪ್ಪಜ್ಜನವರು "ಸಿದ್ಧಿ ಪುರುಷ" ರಾಗಿದ್ದರು ಎಂಬುದಾಗಿ ಕೆಲವರು ನುಡಿದರೆ, ಇನ್ನು ಕೆಲವರು ಅವರೋರ್ವ "ಗಂಭೀರ ಮೂರ್ತಿ"ಯಾಗಿದ್ದರು ಎಂಬುದಾಗಿ ಹೇಳುತ್ತಾರೆ. ಲಿಂ. ಶ್ರೀ ಗುರು ಪಡದಪ್ಪಜ್ಜನವರು "ಓರ್ವ ಪವಾಡ ಪುರುಷ" ರಾಗಿದ್ದರು ಎಂಬುದಾಗಿ ನುಡಿಯುವ ಇನ್ನು ಕೆಲವರು "ನವಿಲುಗುಂದಕ್ಕೆ ನಾಗಲಿಂಗ ಸ್ವಾಮಿಯು ಹೇಗೋ ಹಾಗೆಯೇ ಹಂಚಿನಾಳಕ್ಕೆ ಪಡದಪ್ಪಜ್ಜನವರು" ಎಂಬುದಾಗಿ ನುಡಿಯುತ್ತ ಅವರನ್ನು ನವಿಲುಗುಂದದ ನಾಗಲಿಂಗ ಸ್ವಾಮಿಗಳಿಗೆ ಹೋಲಿಕೆ ಮಾಡುತ್ತಾರೆ. ಲಿಂ. ಶ್ರೀ ಗುರು ಪಡದಪ್ಪಜ್ಜನವರು ಭಕ್ತಿಯ ಸಕಲ ಸ್ಥಲಗಳನ್ನೂ ದಾಟಿ ಶಿವಯೋಗದ ಅಸಾಮಾನ್ಯವಾದ ನಿಲುವನ್ನು ಸಂಪಾದಿಸಿ ದ್ದರು. ಅವರಲ್ಲಿದ್ದ ಅಪಾರವಾದ ಶಿವಜ್ಞಾನ ಸಂಪತ್ತು ಅನೇಕ ಮಹಾ ಪುರುಷರನ್ನು ತನ್ನೆಡೆಗೆ ಆಕರ್ಷಿಸುತ್ತಿತ್ತು. ಅವರ ಪರಮ ವೈರಾಗ್ಯದ ಮಟ್ಟವನ್ನು ಮತ್ತು ಅವರ ಶಿವಾದ್ವೈತದ ನಿಲುವನ್ನು ಅರಿತುಕೊಳ್ಳಲು ಅಸಮರ್ಥರಾದ ಇನ್ನು ಕೆಲವರಿಗೆ ಅವರು ಹುಚ್ಚರಂತೆಯೂ ಸಹ ಕಂಡಿರು ವರು. ಈ ರೀತಿಯಾಗಿ ಅವರು ಕೆಲವರಿಗೆ ಸಿದ್ಧಿ ಪುರುಷರಾಗಿಯೂ, ಇನ್ನು ಕೆಲವರಿಗೆ ಪವಾಡ ಪುರುಷರಾಗಿಯೂ, ಜ್ಞಾನಿಗಳಿಗೆ ಮಹಾಜ್ಞಾನಿ ಯಾಗಿಯೂ, ಅಲ್ಪಮತಿಗಳಿಗೆ ಹುಚ್ಚರಂತೆಯೂ ಮತ್ತು ಜನ ಸಾಮಾನ್ಯ ರಿಗೆ ಗಂಭೀರ ಮೂರ್ತಿಯಾಗಿಯೂ ಕಾಣಿಸಿರುವರು ಎಂಬುದು ಈ ಸಂಗತಿ ಗಳಿಂದ ವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಲಿಂ. ಶ್ರೀ ಗುರು ಪಡದಪ್ಪಜ್ಜನವರು ನಿಜಭಕ್ತಿ, ಸುಜ್ಞಾನ ಮತ್ತು ಪರಮ ವೈರಾಗ್ಯದ ಸುಮಧುರ ಸಂಗಮವಾಗಿ ಸಿದ್ಧಲಿಂಗ ಸ್ವರೂಪಿಯಾಗಿ ಕಂಗೊಳಿಸಿರುವರು.

## ಅಧಿಕೃತ ಮೂಲಗಳು

ಹಂಚಿನಾಳ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಒಂದು ಚಿಕ್ಕ ಗಂಟಿನಲ್ಲಿ ಈ ಕೆಳಗಿನ ಕೆಲವು ಮಹತ್ವದ ಕಾಗದಗಳು ಮತ್ತು ಕೆಲವು ಪುಸ್ತಕಗಳು ಇರುತ್ತವೆ.

೧) ಹಂಚಿನಾಳ ಶ್ರೀ ಹಿರೇಮಠಕ್ಕೆ ಮತ್ತು ಇಲ್ಲಿಯ ಶ್ರೀ ಸಿದ್ಧಲಿಂಗೇಶ್ವರ ದೇವಸ್ಥಾನಕ್ಕೆ ಸಂಬಂಧಿಸಿದ ಕೆಲವು ಕಾಗದಗಳು.

೨) ಆಗಿನ ಕಾಲದಲ್ಲಿ ಹಂಚಿನಾಳದ ಶ್ರೀ ಹಿರೇಮಠಕ್ಕೆ ಬಂದ ಪತ್ರಗಳು.

೩) ಲಿಂಗೈಕ್ಯ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ವಿದ್ಯಾಭ್ಯಾಸಕ್ಕೆ ಹೋದಾಗ ಅವರು ಅಲ್ಲಿಂದ ಹಂಚಿನಾಳಕ್ಕೆ ಬರೆದ ಪತ್ರಗಳು.

೪) ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರುಗಳು ಸಂಗ್ರಹಿಸಿ ಇಟ್ಟಿರುವ ಆಗಿನ ಕಾಲದ ಕೆಲವು ಪ್ರಕಟಿತ ಧಾರ್ಮಿಕ ಗ್ರಂಥಗಳು ಮತ್ತು ಕೆಲವು ಪಂಚಾಂಗಗಳು.

೫) ಪಟ್ಟಾಧ್ಯಕ್ಷರುಗಳು ತಮ್ಮ ಕೈ ಬರಹದಲ್ಲಿ ಸಂಗ್ರಹಿಸಿ ಇಟ್ಟಿರುವ ಧಾರ್ಮಿಕ ಸಾಹಿತ್ಯ, ಮತ್ತು

೬) ಕ್ರಿ. ಶ. ೧೮೫೭ ನೇ ಇಸ್ವಿಯಲ್ಲಿ ಹಂಚಿನಾಳ ಗ್ರಾಮದಲ್ಲಿ ನಡೆದ ಒಂದು ಲೋಕೋಪಯೋಗಿ ಕಾರ್ಯವನ್ನು ಕುರಿತ ಬೆಳಗಾವ್ ಕಲೆಕ್ಟೋರೇಟದ ಪಬ್ಲಿಕ್ ವರ್ಕ್ಸ್ ಡಿಪಾರ್ಟಮೆಂಟಿನ ಒಂದು ವರದಿ, ಮತ್ತು ಕ್ರಿ.ಶ. ೧೮೯೬ ನೇ ಇಸ್ವಿಯ "ಸುಧಾರಕ" ಎಂಬ ಹೆಸರಿನ ಒಂದು ಸಮಾಚಾರ ಪತ್ರಿಕೆ.

ಈ ಮೇಲೆ ತಿಳಿಸಿದ ಕಾಗದಗಳಲ್ಲಿ ಕೆಲವು ಬಹಳ ಹಳೆಯ ಕಾಲದವುಗಳಿದ್ದು ಅವು ಶುದ್ಧವಾದ ಹೊಸಗನ್ನಡದಲ್ಲಿ ಇರುವದಿಲ್ಲ, ಮತ್ತು ಅಸ್ಪಷ್ಟವಾಗಿರುವ ಅವುಗಳನ್ನು ಓದಲು ಸಾಧ್ಯವಾಗುವದಿಲ್ಲ. ಇನ್ನು ಕೆಲವು ಕಾಗದಗಳು ಮರಾಠಿ ಭಾಷೆಯಲ್ಲಿ ಇರುತ್ತವೆ. ಈಗ ಸುಸ್ಥಿತಿಯಲ್ಲಿ ಲಭ್ಯ

ವಿರುವ ಮತ್ತು ಕನ್ನಡ ಭಾಷೆಯಲ್ಲಿದ್ದು ಸ್ಪಷ್ಟವಾಗಿ ಓದಲು ಸಾಧ್ಯವಾಗುವ ಈ ಮೇಲೆ ತಿಳಿಸಿದ ಅಧಿಕೃತ ಮೂಲಗಳು, ಇಲ್ಲಿ ಪ್ರಚಲಿತವಿರುವ ಸ್ಥಳೀಯ ರೂಢಿಗಳು ಹಾಗೂ ಸಂಪ್ರದಾಯಗಳು ಮತ್ತು ಹಂಚಿನಾಳ ಗ್ರಾಮದ ಕೆಲವೇ ಕೆಲವು ಗ್ರಾಮಸ್ಥರಿಂದ ಕೇಳಿ ತಿಳಿದಿರುವ ಅಲ್ಪ ಮಾಹಿತಿಯ ಆಧಾರದ ಮೇಲಿಂದ ಈ ಪುಸ್ತಕವನ್ನು ಬರೆಯಲಾಗಿದೆ. ಲಿಂಗೈಕ್ಯ ಶ್ರೀ ಗುರು ಪಡದಪ್ಪಜ್ಜನವರು ಮಾಡಿದ ಪವಾಡಗಳನ್ನು ಕುರಿತ ಮಾಹಿತಿಯು ಗ್ರಾಮಸ್ಥರಿಂದ ಮತ್ತು ಸದ್ಭಕ್ತರಿಂದ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ದೊರೆಯಬಹುದಾಗಿದೆ. ಜನಪದ ಭಾಷೆಯಲ್ಲಿ ದೊರೆಯುವ ಆ ಮಾಹಿತಿಯನ್ನು ಆಸಕ್ತಿಯುಳ್ಳ ಶ್ರೀ ಗುರುವಿನ ಸದ್ಭಕ್ತರು ಸಂಗ್ರಹಿಸಬಹುದಾಗಿದೆ.

## ಶ್ರೀ ಗುರು ಪರಂಪರೆ

ಹಂಚಿನಾಳ ಗ್ರಾಮದಲ್ಲಿ "ಹಿರೇಮಠ" ಎಂಬ ಹೆಸರಿನಿಂದ ಕರೆಯಲ್ಪಡುವ ಶ್ರೀ ಸ್ಕಂದ ಗೋತ್ರ ಹಾಗೂ ಪಂಚವರ್ಣ ಸೂತ್ರದ ಗಣಂಗಳ (ಅರ್ಥಾತ್ ಜಂಗಮ) ಮನೆತನದ ಪೂರ್ವಜರು ಪ್ರಾಚೀನ ಕಾಲದಲ್ಲಿ ತಮ್ಮ ಮನೆಯ ಪಕ್ಕದಲ್ಲಿ ಮಠವೊಂದನ್ನು ಕಟ್ಟಿ ಅಲ್ಲಿ ಶಿವಾಚಾರ್ಯ ಪರಂಪರೆಯನ್ನು (ಶ್ರೀ ಗುರು ಪರಂಪರೆಯನ್ನು) ಪ್ರಾರಂಭಿಸಿದರು. "ಶಿವಾಗಮಗಳ ದಾರಿಯೇ ಪಂಚಾಚಾರ್ಯರ ಹೆದ್ದಾರಿ. ಪಂಚಾಚಾರ್ಯರ ದಾರಿಯೇ ಧರ್ಮದ ಹೆದ್ದಾರಿ." ಈ ಕಾರಣದಿಂದಾಗಿಯೇ ಪಂಚಾಚಾರ್ಯರ ತತ್ತ್ವಗಳನ್ನು ಬೋಧಿಸುವ ಈ ಮಠವು "ಹಿರಿಯ ಮಠ" ಎಂದೆನಿಸಿಕೊಳ್ಳುತ್ತದೆ. ಇದುವೇ ಹಂಚಿನಾಳದ "ಶ್ರೀ ಹಿರೇಮಠ" ಈ ಮಠದಲ್ಲಿನ ಶ್ರೀ ಗುರು ಪರಂಪರೆಯು ಈ ಮೇಲೆ ತಿಳಿಸಿದ ಮನೆತನದ ವಂಶ ಪರಂಪರೆಯಲ್ಲಿಯೇ ನಡೆದು ಬಂದಿರುವುದು.

ಹಂಚಿನಾಳದ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಕಾಗದಗಳ ಗಂಟಿನಲ್ಲಿ ಈ ಮೇಲೆ ತಿಳಿಸಿದ ಮನೆತನದ ಪೂರ್ವಜರ ವಂಶಾವಳಿಯು ಇರುತ್ತದೆ. ಈ ವಂಶಾವಳಿಯನ್ನು ಒಳಗೊಂಡಿರುವ ಕಾಗದವು ಹಳೆಯ ಕಾಲದ್ದಿದ್ದು, ಅದರ ಮೇಲಿನ ಅರ್ಧ ಭಾಗವು ಹರಿದು ಹೋಗಿದೆ. ಈಗ ಲಭ್ಯವಿರುವ ಈ ವಂಶಾವಳಿಯಲ್ಲಿ ಲಿಂಗೈಕ್ಯ ಶ್ರೀ ಷ. ಬ್ರ. ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು ಮತ್ತು ಅವರ ನಂತರ ಹಂಚಿನಾಳ ಶ್ರೀ ಹಿರೇಮಠದಲ್ಲಿ ಆಗಿಹೋಗಿರುವ

ಶಿವಾಚಾರ್ಯರುಗಳ (ಪಟ್ಟಾಧ್ಯಕ್ಷರುಗಳ) ಹೆಸರುಗಳು ಇರುತ್ತವೆ. ಈ ಕಾಗದದ ಮೇಲಿನ ಅರ್ಧ ಭಾಗವು ಇದ್ದಿದ್ದರೆ ಲಿಂಗೈಕ್ಯ ಶ್ರೀ ಷ. ಬ್ರ. ಗುರು ಸಿದ್ಧ ಶಿವಾಚಾರ್ಯ ಸ್ವಾಮಿಗಳಿಗಿಂತ ಮೊದಲು ಈ ಮಠದಲ್ಲಿ ಆಗಿ ಹೋಗಿ ರುವ ಇನ್ನೂ ಕೆಲವು ಶಿವಾಚಾರ್ಯರುಗಳನ್ನು ಕುರಿತು ಹೆಚ್ಚಿನ ಮಾಹಿ ತಿಯು ನಮಗೆ ಸಿಗಬಹುದಾಗಿತ್ತು. ಲಿಂಗೈಕ್ಯ ಶ್ರೀ ಗುರು ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳಿಗಿಂತ ಹಿಂದಿನ ಕಾಲದ ಮಾಹಿತಿಯು ಇಂದು ಲಭ್ಯವಿರುವ ಬೇರೆ ಯಾವುದಾದರೂ ಅಧಿಕೃತ ಮೂಲಗಳಲ್ಲಿ ದೊರೆಯುವು ದೇನೋ ಎಂಬುದಾಗಿ ತಿಳಿದುಕೊಳ್ಳಲು ಇನ್ನೂ ಹೆಚ್ಚಿನ ಸಂಶೋಧನೆಯಲ್ಲಿ ತೊಡಗಬೇಕಾಗುತ್ತದೆ.

ಲಿಂಗೈಕ್ಯ ಶ್ರೀ ಗುರು ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳ ಜೀವಿತ ಅವಧಿಯು ಸುಮಾರು ಕ್ರಿ.ಶ. ೧೬೭೫ ರಿಂದ ಕ್ರಿ.ಶ. ೧೭೫೦ರ ಮಧ್ಯದ ಅವಧಿ ಯಲ್ಲಿ ಇದ್ದಿರಬಹುದಾಗಿದೆ. ಅವರ ತರುವಾಯ ಹಂಚಿನಾಳ ಶ್ರೀ ಹಿರೇ ಮಠದಲ್ಲಿ ಆಗಿ ಹೋಗಿರುವ ನಾಲ್ಕು ಜನ ಪಟ್ಟಾಧ್ಯಕ್ಷರುಗಳ ಹೆಸರುಗಳು ಈ ಕೆಳಗಿನಂತೆ ಇರುತ್ತವೆ.

ಲಿಂಗೈಕ್ಯ ಶ್ರೀ ಷ.ಬ್ರ. ಶಿವಬಸವ ಶಿವಾಚಾರ್ಯ ಸ್ವಾಮಿಗಳು
ಲಿಂಗೈಕ್ಯ ಶ್ರೀ ಷ.ಬ್ರ. ಚನ್ನಬಸವ ಶಿವಾಚಾರ್ಯ ಸ್ವಾಮಿಗಳು.
ಲಿಂಗೈಕ್ಯ ಶ್ರೀ ಷ ಬ್ರ. ಚನ್ನಬಸವ (ಉರ್ಫ ಪಡದಯ್ಯ) ಶಿವಾ ಚಾರ್ಯ ಸ್ವಾಮಿಗಳು. ಮತ್ತು
ಲಿಂಗೈಕ್ಯ ಶ್ರೀ ಷ ಬ್ರ. ಪಡದಯ್ಯ (ಉರ್ಫ ಮಹಾದೇವ) ಶಿವಾ ಚಾರ್ಯ ಸ್ವಾಮಿಗಳು. (ಲಿಂಗೈಕ್ಯ ಶ್ರೀ ಗುರು ಪಡದಪ್ಪ ಜ್ಜನವರು)

(೩)

## ಹಿರೇಮಠದ

# ಶ್ರೀ ಗುರು ಪರಂಪರೆ

ಇದುವರೆಗೆ ಧರ್ಮ ಭೂಮಿ, ಧರ್ಮಗಳು ಮತ್ತು ನಮ್ಮ ಸಂವಿಧಾನ, ಪಂಚಪೀಠಗಳ ಪರಂಪರೆ, ಧರ್ಮದ ಮೂಲ ಸಿದ್ಧಾಂತ, ಅಷ್ಟಾವರಣಗಳು, ಪಂಚಾಚಾರಗಳು, ಷಟ್‌ಸ್ಥಲ ಮಾರ್ಗ, ಹಿರೇಮಠಗಳು, ಮುಂತಾದ ಹಲವು ವಿಷಯಗಳನ್ನು ಪೀಠಿಕಾ ಭಾಗದಲ್ಲಿಯೂ ಮತ್ತು ಹಂಚಿನಾಳ ಗ್ರಾಮ, ಶ್ರೀ ಸಿದ್ಧಲಿಂಗೇಶ್ವರ, ಲಿಂ. ಶ್ರೀ ಗುರು ಪಡದಪ್ಪಜ್ಜನವರು, ಈ ಪುಸ್ತಕ ರಚನೆಗೆ ಆಧಾರವಾಗಿರುವ ಅಧಿಕೃತ ಮೂಲಗಳು, ಮತ್ತು ಹಂಚಿನಾಳ ಹಿರೇಮಠದಲ್ಲಿನ ಗುರು ಪರಂಪರೆಯ ಸಂಕ್ಷಿಪ್ತ ಪರಿಚಯ, ಮುಂತಾದ ಹಲವು ವಿಷಯಗಳನ್ನು ನಂತರದ ಭಾಗದಲ್ಲಿಯೂ ತಿಳಿದು ಕೊಂಡೆವು. ಇನ್ನು ಈ ಭಾಗದಲ್ಲಿ ಹಂಚಿನಾಳ ಶ್ರೀ ಹಿರೇಮಠದ ಗುರು ಪರಂಪರೆಯಲ್ಲಿ ಆಗಿ ಹೋಗಿರುವ ಕೆಲವು ಪಟ್ಟಾಧ್ಯಕ್ಷರುಗಳನ್ನು (ಗುರು ಗಳನ್ನು) ಕುರಿತು ಪ್ರತ್ಯೇಕವಾಗಿ ವಿವರಿಸಲಾಗುವದು.

**ಪೂಜ್ಯ ಗುರು ಪರಂಪರೆಯ ಉಗಮ :**

ಅನನ್ಯವಾದ ಭಕ್ತಿ, ಅಪಾರವಾದ ಜ್ಞಾನ, ಮತ್ತು ಸ್ವಭಾವ ವೈರಾಗ್ಯ ಗಳಿಂದೊಡಗೂಡಿದ ಮಹಾ ಕಾರಣಿಕ ಪುರುಷರೋರ್ವರು ಶ್ರೀ ಸಿದ್ಧಲಿಂಗೇಶ್ವರನ ಕೃಪೆಗೆ ಪಾತ್ರರಾಗಿ, ಶಿವ ಧರ್ಮನಿಷ್ಠೆಯಿಂದ ಶಿವಸ್ವರೂಪ ವನ್ನು ಮತ್ತು ಶಿವಾದ್ವೈತ ಸಿದ್ಧಾಂತ ಸಾರವನ್ನು ಅರಿತು, ಅಂಗಸ್ಥಲ ಲಿಂಗ ಸ್ಥಲಾತ್ಮಕಗಳಾದ ನೂರೊಂದು ಸ್ಥಲಗಳ ಭೇದ ಸ್ವರೂಪವನ್ನು

ಗ್ರಹಿಸಿ ಲಿಂಗಾಂಗ ಸಾಮರಸ್ಯವನ್ನು ಸಂಪಾದಿಸಿ, ಶಿವಲಿಂಗ ಧರಿಸಿಕೊಂಡು ಶಿವಪೂಜೆಯಲ್ಲಿ ನಿರತರಾಗಿ, ಧರ್ಮ ಬೋಧನೆಯನ್ನು ಮಾಡಿ ಧರ್ಮ ಜಾಗೃತಿಯನ್ನುಂಟು ಮಾಡುವುದರ ಮೂಲಕ ಧರ್ಮ ರಕ್ಷಣೆ ಮಾಡುವ ಮಹೋನ್ನತವಾದ ಮಣಿಹವನ್ನು ಹೊತ್ತು, ಸಂಸಾರ ತ್ಯಾಗ ಮಾಡಿ ಸಂನ್ಯಾಸವನ್ನು ಸ್ವೀಕರಿಸಿ, ಆಚಾರ–ವಿಚಾರ- ಸದಾಚಾರ- ಮೂರಕ್ಕೂ ಕಾರಣ ಕರ್ತೃಗಳಾಗಿ, ಈ ಹಂಚಿನಾಳ ಹಿರೇಮಠದಲ್ಲಿ ಪೂಜ್ಯ ಗುರು ಪರಂಪರೆಯನ್ನು ಪ್ರಾರಂಭಿಸಿದರು, ಸ್ವಯಂ ಸಿದ್ಧಲಿಂಗ ತಾವಾಗಿ ಮಠವನ್ನು ಸ್ಥಾಪಿಸಿ ಸರ್ವ ಜನರಿಗೂ ಧರ್ಮ ಬೋಧೆಯನ್ನು ಮಾಡತೊಡಗಿದರು. ಶಿವ ಸಂದೇಶವನ್ನು ಸಾರಿ ಹೇಳುತ್ತ ಭಕ್ತಿಹೀನರನ್ನು ಭಕ್ತಿವಂತರನ್ನಾಗಿಸಿದರು, ಅಜ್ಞಾನಿಗಳನ್ನು ಜ್ಞಾನವಂತರನ್ನಾಗಿಸಿದರು, ಮತ್ತು ದಟ್ಟ ದಾರಿದ್ರ್ಯದಲ್ಲಿ ತೊಳಲಿ ಬಳಲುತ್ತಿರುವವರನ್ನು ಕ್ರಿಯಾಶೀಲರನ್ನಾಗಿ ಮಾಡಿದರು. ಪ್ರಾಚೀನ ಕಾಲದಲ್ಲಿ ಧರ್ಮವನ್ನು ಬೋಧಿಸುತ್ತ ಮಾನವರಲ್ಲಿ ಮಾನವತ್ವವನ್ನು ಮೂಡಿಸಿದ ಶ್ರೀ ರುದ್ರದೇವನಂತೆ ಹಂಚಿನಾಳದ ಈ ಶ್ರೀ ಸಿದ್ಧಲಿಂಗೇಶ್ವರನ ಅವತಾರಿ ಪುರುಷರು ಪಂಚಾಚಾರ್ಯರ ಶಿವಾಗಮ ತತ್ತ್ವಗಳನ್ನು ಜನ ಸಾಮಾನ್ಯರು ವಾಸಿಸುವೆಡೆಗೆ ತಲುಪಿಸಿ ಶಿವಧರ್ಮದ ಕಹಳೆಯನ್ನು ಮೊಳಗಿಸಿದರು.

ಶ್ರೀ ರುದ್ರದೇವನು ಪಶುಪತಿ ಮತವನ್ನು ಸ್ಥಾಪಿಸಿ ತಾನು ಕಂಡನುಭವಿಸಿದ ಸತ್ಯಸ್ವರೂಪ ಲಿಂಗತತ್ತ್ವವನ್ನು ಪಾಶುಪತರಿಗೂ,ರುದ್ರಗಣ–ಮರುದ್ಗಣರಿಗೂ ಕರುಣಿಸಿದನು. ಅದೇ ಪ್ರಕಾರವಾಗಿ ಹಂಚಿನಾಳ ಶ್ರೀ ಹಿರೇಮಠದ ಕರ್ತೃಗಳು ತಾವು ಕಂಡನುಭವಿಸಿದ ಸತ್ಯ ದರ್ಶನದ ಶಿವಪ್ರಕಾಶದ ಬೆಳಕಿನಲ್ಲಿ ಸುಂದರವಾದ ಶ್ರೀ ಸಿದ್ಧಲಿಂಗ ತತ್ತ್ವವನ್ನು ಸ್ಥಾಪಿಸಿ ಸದ್ಭಕ್ತರ ಹೃದಯದಲ್ಲಿ ಸುವಿಚಾರದ ಬೀಜಗಳನ್ನು ಬಿತ್ತಿದರು. ತಾವು ಈ ಇಹಲೋಕದ ಯಾತ್ರೆಯನ್ನು ಮುಗಿಸುವ ಪೂರ್ವದಲ್ಲಿಯೇ ಯೋಗ್ಯ ವ್ಯಕ್ತಿಯನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡು, ಆತನಲ್ಲಿಯ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಜಾಗೃತಗೊಳಿಸಿ ಶ್ರೀ ಹಿರೇಮಠಕ್ಕೆ ಅಧಿಕಾರಿಯಾಗಬಲ್ಲ ಯೋಗ್ಯತೆಯನ್ನು ಆತನಿಗೆ ಕರುಣಿಸಿದರು. ಶ್ರೀ ಗುರುವಿನ ಕೃಪೆಗೆ ಪಾತ್ರರಾಗಿ ಅವರಿಂದ ಜಂಗಮ ದೀಕ್ಷೆಯನ್ನು (ವೀರಮಾಹೇಶ್ವರ ದೀಕ್ಷೆ) ಪಡೆದುಕೊಂಡ ಅವರ

ಶಿಷ್ಯರು ಶ್ರೀ ಗುರುವು ಹಾಕಿಕೊಟ್ಟ ಮಾರ್ಗದಲ್ಲಿಯೇ ಕ್ರಮಿಸುತ್ತ ಶ್ರೀ ಹಿರೇ ಮಠದಲ್ಲಿ ಧರ್ಮಬೋಧೆಯನ್ನು ಮಾಡುವುದರ ಮೂಲಕ ಜ್ಞಾನ ದಾಸೋಹ ವನ್ನು ಮುಂದುವರಿಸಿದರು. ಈ ಪ್ರಕಾರವಾಗಿ ಹಂಚಿನಾಳದ ಶ್ರೀ ಹಿರೇಮಠದಲ್ಲಿ ಧರ್ಮಜ್ಯೋತಿಯು ನಿರಂತರವಾಗಿ ಬೆಳಗುತ್ತಾ ಬಂದಿತು. ಈ ಮಠದಲ್ಲಿ ಮೂಲ ಪುರುಷರು ಹೊತ್ತಿಸಿದ ಧರ್ಮಜ್ಯೋತಿಯನ್ನು ನಿರಂತರವಾಗಿ ಬೆಳಗಿಸುತ್ತ ಬಂದಿರುವ ಪ್ರತಿಯೊಬ್ಬ ಮಹಾಪುರುಷರ (ಗುರುಗಳ) ಜೀವನ ಚರಿತ್ರೆಯು ನಮಗಿಂದು ಲಭ್ಯವಿರುವದಿಲ್ಲ. ಪ್ರಾಚೀನ ಕಾಲದಿಂದ ನಡೆದು ಬಂದಿರುವ ಈ ಮಠದ ಗುರು ಪರಂಪರೆಯಲ್ಲಿನ ಕೇವಲ ಐದು ಜನ ಪಟ್ಟಾಧ್ಯಕ್ಷರುಗಳನ್ನು ಕುರಿತ ಅಲ್ಪಸ್ವಲ್ಪ ಮಾಹಿತಿಯು ನಮಗಿಂದು ಲಭ್ಯವಿರುತ್ತದೆ. ಸಂನ್ಯಾಸ ವನ್ನು ಮತ್ತು ಜಂಗಮ ದೀಕ್ಷೆಯನ್ನು ಸ್ವೀಕರಿಸಿದ ಶ್ರೀ ಹಿರೇಮಠದ ಗುರು ಗಳಿಗೆ ಪಟ್ಟಾಧ್ಯಕ್ಷರು ಅಥವಾ ಶಿವಾಚಾರ್ಯರು ಎಂಬುದಾಗಿ ಕರೆಯುತ್ತಾರೆ. ಗುರುಮುಖದಿಂದ ಧರ್ಮದೀಕ್ಷೆಯನ್ನು ಪಡೆದ ಇವರು ಷಟ್‌ಸ್ಥಲ ಮಾರ್ಗ ವನ್ನು ಕ್ರಮಿಸುತ್ತಾ, ಐಕ್ಯಸ್ಥಲದ ಸಾಧನೆಯಲ್ಲಿ ತೊಡಗುತ್ತಾರೆ ಮತ್ತು ಶ್ರೀ ಗುರುವಿನ ಕೃಪೆಗೆ ಪಾತ್ರರಾಗಿ ಲಿಂಗಾಂಗ ಸಾಮರಸ್ಯವನ್ನು ಸಂಪಾದಿಸು ವುದರ ಮೂಲಕವಾಗಿ ತಮ್ಮ ಮುಕ್ತಿ ಮಾರ್ಗವನ್ನು ಸುಗಮಗೊಳಿಸಿಕೊಂಡಿ ರುತ್ತಾರೆ. ತಾವು ಅನುಸರಿಸುತ್ತಿರುವ ಧರ್ಮ ಮಾರ್ಗವನ್ನೇ ಸರ್ವರಿಗೂ ಬೋಧಿಸುವ ಅಧಿಕಾರವನ್ನು ಪಡೆದುಕೊಂಡಿರುವ ಇವರನ್ನು 'ಷಟ್‌ಸ್ಥಲ ಬ್ರಹ್ಮ' ಎಂಬುದಾಗಿಯೂ ಸಹ ಕರೆಯುತ್ತಾರೆ.

## ಶ್ರೀ ಷ. ಬ್ರ. ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು

ಶ್ರೀ ಷಟ್‌ಸ್ಥಲ ಬ್ರಹ್ಮ ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು ಹಂಚಿ ನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರು. ಶ್ರೀ ಹಿರೇಮಠದಲ್ಲಿ ಮೂಲ ಪುರುಷರು ಹೊತ್ತಿಸಿದ ಧರ್ಮ ಜ್ಯೋತಿಯನ್ನು ನಿರಂತರವಾಗಿ ಬೆಳಗಿಸುತ್ತ ಬಂದಿರುವ ಗುರುಪರಂಪರೆಯಲ್ಲಿ ಆಗಿ ಹೋಗಿರುವ ಅನೇಕ ಗುರುಗಳಲ್ಲಿ ಇವರೂ ಒಬ್ಬರು. ಈ ಮೊದಲೇ ತಿಳಿಸಿರುವಂತೆ ಇವರ ಜೀವಿತ ಅವಧಿಯು ಸುಮಾರು ಕ್ರಿ.ಶ. ೧೬೭೫ ರಿಂದ ೧೭೫೦ ರ ಮಧ್ಯದಲ್ಲಿ ಇದ್ದಿರಬಹುದು.

"ಸಂಸಾರದಲ್ಲಿ ಹೇತಾಬುದ್ಧಿಯು ಉತ್ಪನ್ನವಾದ ನಂತರ ನಿರ್ಮಲಾಂತ:ಕರಣನೂ ಶರೀರಾತ್ಮ ವಿವೇಕವುಳ್ಳವನೂ, ವಿರಾಗಿಯೂ ಆದ ಸಾಧಕನು ಸಮಸ್ತ ಸಂಸಾರದೋಷಗಳನ್ನು ನಾಶಮಾಡುವ ಮಹಾಲಿಂಗವನ್ನು ತಿಳಿಯಲಿಚ್ಛೆಯುಳ್ಳವನಾಗಿ; ಜಗದ್ವಿಖ್ಯಾತನೂ, ಲೋಭ ಮೋಹ ವಿದೂರನೂ, ಜೀವಾತ್ಮ ಪರಮಾತ್ಮರ ಯಥಾರ್ಥ ಸ್ವರೂಪವನ್ನು ತಿಳಿದವನೂ, ವಿಷಯ ಭ್ರಮದಿಂದ ವಿಮುಕ್ತನಾದವನೂ; ಶಿವಾದ್ವೈತ ಸಿದ್ಧಾಂತ ಸ್ವರೂಪವನ್ನು ತಿಳಿದವನೂ, ನಾನಾವಿಧ ಸಂಶಯಗಳಿಂದುತ್ಪನ್ನವಾದ ವಿಭ್ರಮಗಳನ್ನು ದೂರ ಮಾಡುವವನೂ, ಸಮಸ್ತ ತಂತ್ರಗಳ ಪ್ರಯೋಗವನ್ನು ಬಲ್ಲವನೂ, ಶಿವಧರ್ಮ ನಿಷ್ಠನೂ, ಸತ್ಯವಾದಿಯೂ, ಶಿಷ್ಯ ಸಂಪ್ರದಾಯ ವಿಶಿಷ್ಟ ಪವಿತ್ರ ಗುರುಸ್ಥಲ (ಆಚಾರ್ಯ) ವಂಶಪರಂಪರೆಯಿಂದ ಪ್ರಾಪ್ತವಾದ ಆಚಾರ ಧರ್ಮಗಳುಳ್ಳವನೂ, ಕುತ್ಸಿತಾಚಾರಗಳಿಂದ ದೂರೀಕೃತನಾದವನೂ, ಶಿವಧ್ಯಾನಾಸಕ್ತನೂ, ಶಾಂತನೂ, ಶಿವಸ್ವರೂಪವನ್ನು ಬಲ್ಲವನೂ, ಭಸ್ಮೋದ್ಧೂಲನದಲ್ಲಿ ನಿಷ್ಣಾತನೂ, ಭಸ್ಮಸ್ವರೂಪವನ್ನು ಅರಿತವನೂ, ಭಸ್ಮ ತ್ರಿಪುಂಡ್ರ ಧಾರಣದಲ್ಲಿ ಇಚ್ಛೆಯುಳ್ಳವನೂ, ರುದ್ರಾಕ್ಷಿ ಮಾಲಿಕೆಗಳನ್ನು ಧರಿಸಿದವನೂ, ಶಿವಲಿಂಗಧಾರಣದಿಂದ ಯುಕ್ತನಾದವನೂ, ಶಿವಲಿಂಗ ಪೂಜೆಯಲ್ಲಿ ನಿರತನಾದವನೂ, ಲಿಂಗಾಂಗ ಸಾಮರಸ್ಯ (ಶಿವಜೀವೈಕ್ಯ) ಸ್ವರೂಪವನ್ನು ತಿಳಿದವನೂ, ಶಿವಾದ್ವೈತ ವಾಸನೆಯಲ್ಲಿ ಮಗ್ನನಾದವನೂ, ಅಂಗಸ್ಥಲ ಲಿಂಗಸ್ಥಲಾತ್ಮಕಗಳಾದ ನೂರೊಂದು ಸ್ಥಲಗಳ ಭೇದ ಸ್ವರೂಪವನ್ನು ಗ್ರಹಿಸಿದವನೂ, ಸದಾ ಮಂಗಲ ವಚನಗಳನ್ನಾಡುವವನೂ ಆದ ಶ್ರೀ ಗುರುವನ್ನು ಆಶ್ರಯಿಸಬೇಕು" ಎಂಬುದಾಗಿ ಸಿದ್ಧಾಂತ ಶಿಖಾಮಣಿಯು ಹೇಳುತ್ತದೆ. ಶಿಷ್ಯನಾದವನು ಭಯಭಕ್ತಿಯಿಂದೊಡಗೂಡಿ ಆರು ತಿಂಗಳ ವರೆಗಾಗಲಿ, ಒಂದು ವರ್ಷದ ವರೆಗಾಗಲಿ, ಎಲ್ಲಿಯ ವರೆಗೆ ಶ್ರೀ ಗುರುವು ಪ್ರಸನ್ನನಾಗುವನೋ ಅಲ್ಲಿಯ ವರೆಗೆ ಆ ಗುರುವರ್ಯನ ಸೇವೆಯನ್ನು ಮಾಡಬೇಕು ಎಂಬುದಾಗಿಯೂ ಸಿದ್ಧಾಂತ ಶಿಖಾಮಣಿಯು ಹೇಳುತ್ತದೆ. ಶ್ರೀ ಗುರುವಿನ ಸೇವೆಯನ್ನು ಮಾಡುವುದರ ಮೂಲಕ ಆತನ ಕೃಪೆಗೆ ಪಾತ್ರರಾಗಿ ಶ್ರೀ ಗುರು ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು ಗುರುವಿನ ಕಾರ್ಯವನ್ನು ಮುಂದುವರಿಸಿ

ಕೊಂಡು ಬರುವ ಮಹಾಮಹಿಮನನ್ನು ಹೊತ್ತುಕೊಂಡು ಶ್ರೀ ಗುರುವಿನ ಉತ್ತರಾಧಿಕಾರಿಯಾದರು ಶ್ರೀ ಗುರುವು ಹಾಕಿಕೊಟ್ಟ ಮಾರ್ಗದಲ್ಲಿ ನಡೆದು ಶ್ರೀ ಹಿರೇಮಠದಲ್ಲಿ ಧರ್ಮ ಬೋಧೆಯನ್ನು ಮಾಡುವುದರ ಮೂಲಕ ಜ್ಞಾನ ದಾಸೋಹನನ್ನು ಮುಂದುವರಿಸಿದರು.

ಶ್ರೀ ಗುರು ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳ ಪೂರ್ವಾಶ್ರಮದ ತಂದೆ ತಾಯಿಯರ ಹೆಸರುಗಳು ಲಭ್ಯವಿರುವದಿಲ್ಲ. ಇವರು ಶ್ರೀಯುತ ಸಿದ್ಧ ಬಸಯ್ಯ ಮತ್ತು ಶ್ರೀಯುತ ಚರಂತಯ್ಯ ಇವರುಗಳ ಸಹೋದರರೆಂಬುದು ಮಾತ್ರ ತಿಳಿದು ಬರುತ್ತದೆ.

ಶ್ರೀ ಗುರು ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು ತಮ್ಮ ಪೂರ್ವಾಶ್ರಮದ ಸಹೋದರರಾಗಿದ್ದ ಶ್ರೀಯುತ ಸಿದ್ಧಬಸಯ್ಯ ಹಿರೇಮಠ ಇವರ ಹಿರಿಯ ಮಗ ಶ್ರೀ ಶಿಬಸಯ್ಯನವರನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸುತ್ತಾರೆ. ಶ್ರೀ ಗುರು ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು ಲಿಂಗೈಕ್ಯರಾದ ನಂತರ ಶ್ರೀ ಗುರು ಶಿವಬಸಯ್ಯನವರೇ ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಾಗಿ ಶಿವಾಚಾರ್ಯರೆನಿಸಿಕೊಳ್ಳುತ್ತಾರೆ.

### ಶ್ರೀ ಷ.ಬ್ರ ಶಿವಬಸವ ಶಿವಾಚಾರ್ಯ ಸ್ವಾಮಿಗಳು

ಶ್ರೀ ಗುರು ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು ಲಿಂಗೈಕ್ಯರಾದ ನಂತರ ಅವರ ಶಿಷ್ಯ ಶ್ರೀ ಗುರು ಶಿವಬಸವ ಸ್ವಾಮಿಗಳು ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಾಗುತ್ತಾರೆ. ಶಿವಾಚಾರ್ಯರೆನಿಸಿಕೊಳ್ಳುತ್ತಾರೆ. ಶ್ರೀ ಗುರುವಿನ ಕೃಪೆಗೆ ಪಾತ್ರರಾಗಿದ್ದ ಇವರು ಗುರುಗಳಿಂದ ಪಟ್ಟಾಧಿಕಾರವನ್ನು ಪಡೆದು ಶ್ರೀ ಗುರುವು ಹಾಕಿಕೊಟ್ಟ ಮಾರ್ಗದಲ್ಲಿಯೇ ಕ್ರಮಿಸುತ್ತ ಶ್ರೀ ಹಿರೇಮಠದಲ್ಲಿ ಧರ್ಮಬೋಧೆಯನ್ನು ಮಾಡುವುದರ ಮೂಲಕ ಜ್ಞಾನ ದಾಸೋಹವನ್ನು ಮುಂದುವರಿಸಿದರು. ಶ್ರೀ ಷಟ್‌ಸ್ಥಲ ಬ್ರಹ್ಮ ಶಿವಬಸವ ಶಿವಾಚಾರ್ಯ ಸ್ವಾಮಿಗಳ ಜೀವಿತ ಅವಧಿಯು ಸುಮಾರು ಕ್ರಿ. ಶ. ೧೭೭೫ ರಿಂದ ೧೮೦೦ರ ಮಧ್ಯದ ಅವಧಿಯಲ್ಲಿ ಇದ್ದಿರಬಹುದು.

ಶ್ರೀಯುತ ಮರಳಸಿದ್ಧಯ್ಯ ಎಂಬವರು ಶ್ರೀ ಗುರು ಶಿವಬಸವ ಶಿವಾಚಾರ್ಯ ಸ್ವಾಮಿಗಳ ಸಮಕಾಲೀನರು (ಅವರ ಚಿಕ್ಕಪ್ಪನ ಮಗ). ಶ್ರೀಯುತ ಮರಳಸಿದ್ಧಯ್ಯನವರ ಜೇಷ್ಠ ಪುತ್ರನ ಹೆಸರು ಗುರುಸಿದ್ಧಯ್ಯ. ಇಂದು ಲಭ್ಯವಿರುವ ಹಂಚಿನಾಳ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಕಾಗದಗಳ ಗಂಟಿನಲ್ಲಿ ದೊರೆತಿರುವ ಅನೇಕ ಪತ್ರಗಳಲ್ಲಿ ಒಂದು ಪತ್ರವು ಶ್ರೀಯುತ ಮರಳ ಸಿದ್ಧಯ್ಯ ಮತ್ತು ಶ್ರೀಯುತ ಗುರುಸಿದ್ಧಯ್ಯನವರ ಹೆಸರಿಗೆ ಬಂದಿರುತ್ತದೆ. ಆ ಪತ್ರವು ಈ ಕೆಳಗಿನಂತೆ ಇರುತ್ತದೆ.

॥ ಶ್ರೀ ಗುರುವೆ ಪ್ರಸನ್ನಾ ॥

ಶ್ರೀ ಗುರುಮೂರ್ತಿ ರಾಜಾಧಿರಾಜ ಮಾನ್ಯ
ರಾಜಶ್ರೀ ಮರುಳಸಿದ್ಧ ದೇವರು ವ
ಗುರುಸಿದ್ಧ ದೇವರು ಮಠ ಹಂಚಿನಾಳ
ಸ್ವಾಮಿಯವರಿಗೆ—

ಸಿ॥ ಬಾ ॥ ಕಿತ್ತೂರ ಸಂಸ್ಥಾನ ಸುಭೇದಾರ ಈರಪ್ಪನು ಮಾಡುವ ಅನೇಕ ದೀರ್ಘದಂಡ ನಮಸ್ಕಾರವು. ನಾವು ತಮ್ಮ ಕೃಪಾಕಟಾಕ್ಷ ಬಲದಿಂದ ಕ್ಷೇಮದಲ್ಲಿ ಇದ್ದೇವು. ತಾವು ತಮ್ಮ ಕುಶಳತಿಯು..............ಬಸವಮುಖ ದಿಂದ ಪರಾಮರ್ಶವಲ್ಲಿಗೆ ಸ್ವಾಮಿಗಳೇ ಇದ್ದೀರಿ. ವೈಮನಸ್ಸು ಮಾಡಿ ಸ್ವಸ್ಥಳ ಬಿಟ್ಟಲ್ಲಿಗೆ ರಾ ॥ ನರಹರ ಪಂತರು, ಕಾರಕೂನ ಬಂದಿದ್ದಾರೆ. ಅದರ ಸಲುವಾಗಿ ತಮ್ಮ ಪಾದಕ ಈ ಪತ್ರ ಕಳಿಸಿದೆವು. ಕಾಗದ ಕಂಡಾಕ್ಷಣದಲ್ಲಿ ತಾವು ಇಲ್ಲಿಯ ತನಕಾ ಆಗಮನ ಮಾಡುವದು. ಇಲ್ಲಿ ಸ್ಥಳವಿಡಿದು ...........ದಿಂದ ಸನಮತ ಸಮಜಾವಿಸಿ ಮಾಡಿ ತಮ್ಮ ಸ್ವಸ್ಥಳಕ್ಕೆ ಸ್ಥಾಪ್ಯ ಮಾಡಬೇಕು ಎಂಬೋ ಹಾಗೆ ಆಗೇತಿ. ಕಾಗದ ಕಂಡಾಕ್ಷಣ ಆಲಸ್ಯ ಮಾಡದೆ ತ್ವರದಿಂದ ಬರಬೇಕು. ವಿಶೇಷವಾಗಿ ಲೇಖನ ಮಾಡಲಿಕ್ಕೆ ಶಕ್ತನಲ್ಲವು. ಸರ್ವದಾ ಕೃಪೆ ಇರಬೇಕು.

ಈ ಮೇಲೆ ತಿಳಿಸಿದ ಪತ್ರದಲ್ಲಿ ಬರೆಯಲಾಗಿರುವ ಗುರುಸಿದ್ಧ ದೇವರು ಎಂಬ ಹೆಸರು ಶ್ರೀಯುತ ಮರಳಸಿದ್ಧಯ್ಯನವರ ಜೇಷ್ಠ ಪುತ್ರನ ಹೆಸರು ಇದ್ದಿರಬಹುದು.

ಶ್ರೀ ಗುರು ಶಿವಬಸವ ಶಿವಾಚಾರ್ಯ ಸ್ವಾಮಿಗಳು ಶ್ರೀಯುತ ಮರುಳ ಸಿದ್ಧಯ್ಯನವರ ದ್ವಿತೀಯ ಪುತ್ರ ಶ್ರೀ ಚನ್ನಬಸಯ್ಯನವರನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ ಆತನನ್ನೇ ತಮ್ಮ ಉತ್ತರಾಧಿಕಾರಿಯನ್ನಾಗಿ ನೇಮಿಸಿ ಕೊಳ್ಳುತ್ತಾರೆ.

## ಶ್ರೀ ಷ. ಬ್ರ. ಚನ್ನಬಸವ ಶಿವಾಚಾರ್ಯ ಸ್ವಾಮಿಗಳು

ಶ್ರೀ ಗುರು ಶಿವಬಸವ ಶಿವಾಚಾರ್ಯಸ್ವಾಮಿಗಳು ಲಿಂಗೈಕ್ಯರಾದ ನಂತರ ಹಂಚಿನಾಳ ಶ್ರೀ ಹಿರೇಮಠದಲ್ಲಿ ಜ್ಞಾನದಾಸೋಹದ ಪವಿತ್ರ ಕಾರ್ಯವನ್ನು ಅವರ ಶಿಷ್ಯರಾದ ಶ್ರೀ ಗುರು ಚನ್ನಬಸಯ್ಯ ಸ್ವಾಮಿಗಳು ಮುಂದುವರಿಸಿದರು.

ಗುರುಸ್ತುತಿಗೈಯ್ಯುವುದು ಶಿಷ್ಯನ ಗುರಿಯಾದರೆ; ಕರುಣೆದೋರುವುದು ಗುರುವಿನ ಅಗ್ಗಳಿಕೆಯಾಗಿದೆ. ಗುರುಕರುಣೆಯೇ ಮಾನವ ಜೀವನದ ಸಾರಸರ್ವಸ್ವವೆಂಬುದು ಅನುಭವಿಗಳ ಸಂದೇಶವಾಗಿದೆ.

ಗುರುಕೃಪಾ ಬಲವೇ ಶಿಷ್ಯರಿಗೆ ಜೀವಾಳ ;<br>
ಗುರುಕೃಪಾ ಬಲವೇ ಲಿಂಗಾಂಗ ಸಮರಸದ<br>
ಮುಂಬೆಳಗು<br>
ಗುರುಕೃಪಾ ಬಲವೇ ವೀರಶೈವನ ಒಳಬೆಳಗು<br>
ಗುರುಸೇವೆಯ ಮಾಡಿ ಗುರುಕೃಪೆಯ<br>
ಪಡೆಯೆಂದ<br>
ನಮ್ಮ ಮೃಡಗಿರಿ ಅನ್ನದಾನೀಶ.

ಎಂಬ ಶರಣರ ವಚನಕ್ಕನುಗುಣವಾಗಿ ತಮ್ಮ ಬಾಲ್ಯ ಜೀವನದಲ್ಲಿಯೇ ಶ್ರೀ ಗುರು ಚನ್ನಬಸಯ್ಯ ಸ್ವಾಮಿಗಳು ತಮ್ಮ ಗುರುವಿನ ಸೇವೆಯನ್ನು ಪ್ರಾರಂಭಿಸಿದರು.

ಗುರುದೇವನು ಕರುಣಾಮಯನು. ಭವ ಬಂಧನದಲ್ಲಿ ಬಿದ್ದು ದುಃಖಿಯಾಗುತ್ತಿರುವ ಮಾನವರನ್ನು ಉದ್ಧರಿಸುತ್ತಾನೆ. ಮಾಂಸಮಯ ಶರೀರವನ್ನು ಮಂತ್ರಮಯವನ್ನಾಗಿಸುತ್ತಾನೆ. ಶಿಷ್ಯನಿಗೆ ತನ್ನ ಹಸ್ತ ಕಮಲದಲ್ಲಿ ಪುನ

ರ್ಜನ್ಮವನ್ನೀಯುತ್ತಾನೆ. ಅದು ಕಾರಣವೇ ಶರಣರು ಗುರುಕರ ಸಂಜಾತರೆಂದು ಹೆಸರು ಪಡೆಯುತ್ತಾರೆ. ಶರಣನಿಗೆ ಹುಟ್ಟು-ಸಾವಿನ ಕೀಲವನ್ನು ತಿಳಿಸಿ ಮುಕ್ತನಾಗುವ ಮಾರ್ಗವನ್ನು ಶ್ರೀ ಗುರುವು ತಿಳಿಸುತ್ತಾನೆ. ತನುತ್ರಯಗಳನ್ನು ಪಾವನಗೊಳಿಸಿ ಲಿಂಗತ್ರಯವನ್ನು ಕರುಣಿಸುತ್ತಾನೆ. ಮಹಾಮಂತ್ರವನ್ನು ಬೋಧಿಸಿ ಶರಣ ಮಾರ್ಗವನ್ನು ತಿಳಿಸುತ್ತಾನೆ. ಮರವೆಯನ್ನು ದೂರಗೊಳಿಸಿ ಅರಿವನ್ನು ಜಾಗೃತಗೊಳಿಸುತ್ತಾನೆ. ಅರಿವಿನ ಕುರುಹೇ ಲಿಂಗವೆಂದು ಮನವರಿಕೆ ಮಾಡಿಕೊಡುತ್ತಾನೆ. ಇಂಥ ಶರಣನು ಭವ ಚಕ್ರವನ್ನು ದಾಟಿ ಮುಕ್ತನಾಗುತ್ತಾನೆ. ಪುನರ್ಜನ್ಮವನ್ನು ಕಳೆದುಕೊಳ್ಳುತ್ತಾನೆ. ಶಿವನ ಸೃಷ್ಟಿಯಿಂದ ಪಾರಾಗುತ್ತಾನೆ.

ಪ್ರಭುಲಿಂಗಲೀಲೆಯಲ್ಲಿ ಶಿವನಿಗೆ ಪಾರ್ವತಿಯು "ಹೇ ದೇವಾ ನಾಮ ರೂಪ ಕ್ರಿಯೆಗಳನ್ನು ಗೆಲ್ಲಬಲ್ಲ, ನಿತ್ಯ ಮುಕ್ತನಾಗುವ ನಿರ್ಮಲವಾದ ಉದ್ಯೋಗವಾವುದು'' ಎಂದು ಕೇಳಲು ಆಗ ಶಿವನು "ಭೋಗಭೂಮಿಯಾದ ಭೂತಲದಲ್ಲಿ ಮಾನವ ಶರೀರಿಯಾಗಿ ಹುಟ್ಟಿ ಶರಣನಾಗಿ ಶಿವಯೋಗ ಮಾರ್ಗದಿಂದ ನಿಜವನ್ನು ಸಾಧಿಸಿ ಮುಕ್ತರಾಗಬಹುದು" ಎಂದು ತಿಳಿಸಿದ ಮಾತುಗಳು ಮನನೀಯವಾಗಿವೆ.

ಜೀವನನ್ನು ಶಿವನನ್ನಾಗಿ ಮಾಡುವ ಮಹಾಶಕ್ತಿ ಸದ್ಗುರುವಿನಲ್ಲಿದೆ. ಒಂದು ದೀಪದಿಂದ ಮತ್ತೊಂದು ದೀಪವು ಬೆಳಗುವಂತೆ ಗುರುವರನು ಸತ್ ಶಿಷ್ಯರನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ಆತನು ಅನೇಕ ಗುರುಬಳಗವನ್ನೇ ತಯಾರಿಸುವನು. ಒಬ್ಬ ಶರಣನನ್ನಲ್ಲ, ಶರಣ ಸಂತತಿಗೇನೇ ಆತನು ಕಾರಣ ಕರ್ತನಾಗುವನು. ಇಂಥ ಅಪಾರ ಶಕ್ತಿಯನ್ನು ಪಡೆದ ಓ ಗುರುವೆ! ನಿನ್ನಡಿಯ ಬಯಸಿ ಬಂದಿರುವೆ. ನಿನ್ನ ಸಿರಿಯಡಿಗೆ ಮುಡಿಯಿಡುವೆ ಪಿಡಿದೆತ್ತಿ ಬಿಡದಲೇ ನೀ ಕಾಪಾಡು ಎಂಬುದಾಗಿ ಶ್ರೀ ಚನ್ನಬಸಯ್ಯ ಸ್ವಾಮಿಗಳು ಶ್ರೀ ಗುರುವಿನ ಪಾದ ಸೇವೆಯನ್ನು ಮಾಡಿದರು.

ಶ್ರೀ ಗುರು ಶಿವಬಸವ ಶಿವಾಚಾರ್ಯ ಸ್ವಾಮಿಗಳ ಶಿಷ್ಯರಾಗಿದ್ದುಕೊಂಡು ಭಕ್ತಿ ಗೌರವಗಳಿಂದ ಅವರನ್ನು ಪೂಜಿಸಿ, ತ್ರಿಕಾಲದಲ್ಲಿಯೂ ಅವರ ಸೇವೆಯನ್ನು ಮಾಡಿ, ಅವರ ಕರುಣೆಗೆ ಪಾತ್ರರಾದ ಶ್ರೀ ಚನ್ನಬಸಯ್ಯ

ಸ್ವಾಮಿಗಳು ಅವರಿಂದ ವೀರ ಮಾಹೇಶ್ವರ ದೀಕ್ಷೆ ಪಡೆದು ಮಠದ ಉತ್ತರಾಧಿಕಾರಿಯಾದರು. ಶ್ರೀ ಗುರುವು ಶಿವಸಾಯುಜ್ಯ ಹೊಂದಿದ ನಂತರ ಶ್ರೀ ಹಿರೇಮಠದ ಪಟ್ಟಾಧಿಕಾರ ವಹಿಸಿಕೊಂಡು ಶಿವಾಚಾರ್ಯರಾದರು. ಶ್ರೀ ಹಿರೇಮಠದಲ್ಲಿ ಹಿಂದಿನ ಗುರುಗಳು ನಡೆಸಿಕೊಂಡು ಬಂದ ಜ್ಞಾನ ದಾಸೋಹದ ಕಾರ್ಯವನ್ನು ಮುಂದುವರಿಸಿದರು.

ಈ ಮೊದಲೇ ತಿಳಿಸಿರುವಂತೆ ಶ್ರೀ ಗುರು ಚನ್ನಬಸವ ಶಿವಾಚಾರ್ಯ ಸ್ವಾಮಿಗಳು ಶ್ರೀಯುತ ಮರಳಸಿದ್ಧಯ್ಯನವರ ದ್ವಿತೀಯ ಸುಪುತ್ರರು. ಇವರ ಜೀವಿತ ಅವಧಿಯು ಸುಮಾರು ಕ್ರಿ. ಶ. ೧೭೭೫ ರಿಂದ ೧೮೫೫ ರ ಮಧ್ಯದಲ್ಲಿ ಇದ್ದಿರಬಹುದು.

ಹಂಚಿನಾಳ ಹಿರೇಮಠಕ್ಕೆ ಸಂಬಂಧಿಸಿದ ಕಾಗದಗಳ ಚಿಕ್ಕ ಗಂಟಿನಲ್ಲಿ ಶ್ರೀ ಗುರು ಚನ್ನಬಸವ ಶಿವಾಚಾರ್ಯ ಸ್ವಾಮಿಗಳ ಕಾಲದ ಆಗಿನ ಸರಕಾರದಿಂದ ಹಂಚಿನಾಳ ಗ್ರಾಮದಲ್ಲಿ ನಡೆದ ಲೋಕೋಪಯೋಗಿ ಕಾರ್ಯದ ವರದಿಯೊಂದು ಇರುತ್ತದೆ. ಇದು ಕ್ರಿ ಶ. ೧೮೫೯ ರಲ್ಲಿ "ಬೆಳಗಾವ್ ಕಲೆಕ್ಟೋರೇಟ (ಕ್ಯಾನರೀಸ)" ಇವರಿಂದ ಪ್ರಕಟಿಸಲ್ಪಟ್ಟದೆ. "ಸ್ಟೇಟ ಮೆಂಟ್ ಆಫ್ ವರ್ಕ್ಸ ಆಫ್ ಪಬ್ಲಿಕ್ ಯುಟಿಲಿಟಿ" ಎಂಬ ತಲೆಬರಹವನ್ನು ಹೊಂದಿರುವ ಈ ವರದಿಯು ಎರಡು ಲೋಕೋಪಯೋಗಿ ಕಾರ್ಯಗಳ ವಿವರಗಳನ್ನೊಳಗೊಂಡಿರುತ್ತದೆ. ಇದು ಪಬ್ಲಿಕ್ ವರ್ಕ್ಸ ಡಿಪಾರ್ಟಮೆಂಟಿಗೆ ಸಂಬಂಧಿಸಿದ್ದು. ಇದು, ಕನ್ನಡ ಭಾಷೆಯಲ್ಲಿ ಪ್ರಿಂಟ ಮಾಡಲ್ಪಟ್ಟಿದೆ. ಈ ವರದಿಯಲ್ಲಿ ಹಂಚಿನಾಳ ಮತ್ತು ಅಥಣಿಯಲ್ಲಿ ಕ್ರಿ. ಶ. ೧೮೫೭ ರಲ್ಲಿ ಮಾಡಲಾದ ಎರಡು ಸಾರ್ವಜನಿಕ ಕಾರ್ಯಗಳ ವಿವರವು ಇರುತ್ತದೆ. ಪರಸಗಡ ತಾಲೂಕಿನ ಹಂಚಿನಾಳ ಗ್ರಾಮದಲ್ಲಿ ಊರಿನ ಜನರು ಹಂಚಿನಾಳದ ಕುಡಿಯುವ ನೀರಿನ ಕೆರೆಯನ್ನು ಸಾಫ ಮಾಡಿದ (ರಿಪೇರಿ ಮಾಡಿದ) ಬಗ್ಗೆ ಈ ವರದಿಯಲ್ಲಿ ಬರೆಯಲಾಗಿದೆ. ಈ ಕಾರ್ಯಕ್ಕೆ ತಗಲಿದ ಖರ್ಚು ಐದುನೂರು ರೂಪಾಯಿ. ಈ ವರದಿಯಲ್ಲಿ ಬರೆಯಲ್ಪಟ್ಟಿರುವ ಇನ್ನೊಂದು ಕಾರ್ಯವೆಂದರೆ ಅಥಣಿ ತಾಲೂಕಿನಲ್ಲಿಯ ಅಥಣಿ ಪಟ್ಟಣದಲ್ಲಿಯ ಧರ್ಮ ಶಾಲೆಗೆ ಸಂಬಂಧಿಸಿದ ಕಾರ್ಯ. ಅಥಣಿಯ ಕಲ್ಮೇಶ್ವರ ದೇವಸ್ಥಾನದ

ಬಳಿಯಲ್ಲಿ ಪೂರ್ವದ ಕಡೆಗೆ ಹೊಸದೊಂದು ಧರ್ಮಶಾಲೆಯನ್ನು ಕಟ್ಟಿಸಿದ ಸಂಗತಿಯು ಈ ವರದಿಯಲ್ಲಿ ಬರೆಯಲ್ಪಟ್ಟಿದೆ. ಧರ್ಮಶಾಲೆ ಕಟ್ಟುವ ಕಾರ್ಯವನ್ನು ಕಸಬಿದ ಜನರು ಮಾಡುವರು ಮತ್ತು ಆ ಕಾರ್ಯಕ್ಕೆ ಒಂದು ನೂರಾ ಐವತ್ತೆರಡು ರೂಪಾಯಿ ಖರ್ಚು ತಗಲಿತು. ಈ ವರದಿಯು ತಾರೀಖ ೨೭ ಸಪ್ಟಂಬರ ೧೮೫೮ ರಂದು ಮುಂಬಯಿಯಲ್ಲಿ ತಯಾರಿಸಲ್ಪಟ್ಟಿದೆ.

ಇದೇ ರೀತಿ ಈ ಮೇಲೆ ತಿಳಿಸಿದ ಕಾಗದಗಳ ಗಂಟಿನಲ್ಲಿ "ಅಥ ರೂಪಾವಲಿ ಪ್ರಾರಂಭ" ಎಂಬುದಾಗಿ ಪ್ರಾರಂಭಗೊಳ್ಳುವ, ವ್ಯಾಕರಣಕ್ಕೆ ಸಂಬಂಧಿಸಿದ ಪುಸ್ತಕವೊಂದು ಇರುತ್ತದೆ. ಕೈ ಬರಹದಲ್ಲಿರುವ ಈ ಪುಸ್ತಕವು ಬಹಳ ಹಳೆಯ ಕಾಲದ ಪುಸ್ತಕದಂತೆ ಕಾಣುತ್ತದೆ. ಅದರಲ್ಲಿ ಬರೆದ ತಾರೀಖಿನ ಪ್ರಕಾರ ಅದು ಕ್ರಿ. ಶ. ೧೮೬೪ ನೇ ಇಸ್ವಿ (ಶಾಲಿವಾಹನ ಶಕೆ ೧೭೮೬ ರಕ್ತಾಕ್ಷಿನಾಮ ಸಂವತ್ಸರ) ಗಿಂತಲೂ ಮೊದಲಿನ ಕಾಲದಲ್ಲಿ ಬರೆಯಲ್ಪಟ್ಟಿರುವುದೆಂಬ ಸಂಗತಿಯು ತಿಳಿಯುತ್ತದೆ. ಬಹುಶಃ ಇದನ್ನು ಶ್ರೀಗುರು ಚನ್ನಬಸವ ಶಿವಾಚಾರ್ಯ ಸ್ವಾಮಿಗಳು ಸಂಗ್ರಹಿಸಿ ಇಟ್ಟಿರಬಹುದು.

ಶ್ರೀ ಗುರು ಚನ್ನಬಸವ ಶಿವಾಚಾರ್ಯಸ್ವಾಮಿಗಳು ತಮ್ಮ ಪೂರ್ವಾಶ್ರಮದ ಸಹೋದರರಾದ ಶ್ರೀಯುತ ಗುರುಸಿದ್ಧಯ್ಯನವರ ಮೊಮ್ಮಗನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಕ್ರಿ. ಶ. ೧೮೯೨ ರಲ್ಲಿ ನೇಮಿಸಿಕೊಳ್ಳುತ್ತಾರೆ. ಸುಮಾರು ಕ್ರಿ. ಶ ೧೮೯೪ ರಲ್ಲಿ ಶಿವಸಾಯುಜ್ಯ ಹೊಂದುತ್ತಾರೆ.

## ಶ್ರೀ ಷ. ಬ್ರ. ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯ ಸ್ವಾಮಿಗಳು

ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯ ಸ್ವಾಮಿಗಳ ಪೂರ್ವಾಶ್ರಮದ ಹೆಸರು ಪಡದಯ್ಯ ಎಂಬುದಾಗಿ ಇದ್ದಿರಬಹುದು. ಇವರನ್ನು ಹುಂಚಿನಾಳದ ಶ್ರೀ ಹಿರೇಮಠಕ್ಕೆ ಉತ್ತರಾಧಿಕಾರಿಯನ್ನಾಗಿ ನೇಮಿಸುವ ಸಮಯದಲ್ಲಿ ಇವರಿಗೆ ತಮ್ಮ ಗುರುಗಳ ಹೆಸರನ್ನೇ ಇಡಲಾಗುತ್ತದೆ.

ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯ ಸ್ವಾಮಿಗಳು ಸುಮಾರು ಕ್ರಿ. ಶ. ೧೮೯೨ ರಲ್ಲಿ ಜನಿಸಿದರು. ಇವರ ತಂದೆಯ ಹೆಸರು ಶ್ರೀಯುತ ದೊಡ್ಡಸಿದ್ಧಯ್ಯ. "ಬೆಳೆಯುವ ಸಿರಿಯು ಮೊಳಕೆಯಲ್ಲಿ ಇರುತ್ತದೆ."

ಎಂಬ ಮಾತಿನಂತೆ ಬಾಲ್ಯಾವಸ್ಥೆಯಲ್ಲಿಯೇ ಇವರಲ್ಲಿ ಎದ್ದು ಕಾಣುತ್ತಿದ್ದ ಸಾತ್ವಿಕ ಗುಣ ಸಂಪತ್ತು, ಶಾಂತಿ, ಸಮಾಧಾನ ಇವುಗಳನ್ನು ಕಂಡ ಶ್ರೀಗುರು ಚನ್ನಬಸವ ಶಿವಾಚಾರ್ಯ ಸ್ವಾಮಿಗಳು ಇವರಿನ್ನೂ ಚಿಕ್ಕ ವಯಸ್ಸಿನವರಿರುವಾಗಲೇ ಇವರನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾರೆ. "ಗುರುನಾಂ ದರ್ಶನಂ ಪುಣ್ಯಂ'' ಅಂದರೆ ಶ್ರೀ ಗುರುವಿನ ದರ್ಶನದಿಂದ ಪುಣ್ಯವು ಲಭಿಸುತ್ತದೆ. ಅದರಂತೆಯೇ "ಶ್ರೀ ಗುರು ವಚನೋಪದೇಶವನಾಲಿಸಿದಾಗ ಆಹುದು ನರಿಗೆ ಮುಕುತಿ". "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ". ಆದ್ದರಿಂದ, ಶ್ರೀ ಗುರುವಿನ ಸೇವೆಯನ್ನು ಮಾಡುವ ಅವಕಾಶ ದೊರೆಯಬೇಕಾದರೆ ಅದಕ್ಕೂ ಪೂರ್ವಜನ್ಮದ ಪುಣ್ಯವಿರಬೇಕು. ಇನ್ನು ಶ್ರೀ ಗುರುವಿನ ಪಾದ ಸೇವೆಯ ಫಲವಂತೂ ಅತ್ಯಧಿಕವಾಗಿರುತ್ತದೆ. ಗುರುಪಾದ ಸೇವೆ ತಾ॥ ದೊರೆಕೊಂಡಿತಾದಡೆ॥ ಪಿರಿದಾದ ಪಾಪ ಪರಿಯುವದು ಕರ್ಪುರದ ॥ ಗಿರಿಯು ಸುಟ್ಟಂತೆ ಸರ್ವಜ್ಞ ॥ ಶ್ರೀ ಗುರುವಿನ ಪಾದ ಸೇವೆ ಮಾಡುವುದರಿಂದ ಮತ್ತು ಆತನ ಉಪದೇಶವನ್ನು ಆಲಿಸಿ ಆದರಂತೆ ನಡೆದುಕೊಳ್ಳುವುದರಿಂದ ನಮ್ಮ ಪಾಪವೆಲ್ಲವೂ ನಾಶವಾಗಿ ಹೋಗುವುದಂತೂ ಖಂಡಿತ. ಇನ್ನು ಶ್ರೀ ಗುರುವಿನ ಕರುಣೆಯಾದರಂತೂ ಅದರಿಂದ ಅಸಾಧ್ಯವೆನಿಸುವ ಕಾರ್ಯವೂ ಸಹ ಸಾಧ್ಯವಾಗುತ್ತದೆ. ಅಂತಹ ಅಸಾಧಾರಣವಾದ ಸಾಮರ್ಥ್ಯವು ಯೋಗ್ಯವಾದ ಗುರುವಿನಲ್ಲಿ ಇರುತ್ತದೆ. ಶ್ರೀ ಗುರುವು ಕರುಣೆದೋರಿದರೆ ನಾವು ದೇವರನ್ನೇ ಕಾಣಬಹುದು.

ಮೂರು ಕಣ್ಣೀಶ್ವರನ । ತೋರಿ ಕೊಡಬಲ್ಲ ಗುರು ।
ಬೇರದರೊಳೊಂದು ತೆರನಿಲ್ಲ ಗುರು
ಕರುಣ ತೋರುವದು ಹರನ ಸವಜ್ಞ ॥

ಬಾಲ್ಯದಲ್ಲಿಯೇ ಶ್ರೀ ಗುರುವಿನ ಸೇವೆ ಮಾಡುವ ಭಾಗ್ಯವನ್ನು ಪಡೆದ ಬಾಲಕ ಪಡದಯ್ಯನು ಅನನ್ಯವಾದ ಭಕ್ತಿ, ಗೌರವಗಳಿಂದ ಶ್ರೀ ಗುರುವಿನ ಸೇವೆ ಮಾಡಿ ಗುರು ಕರುಣೆಗೆ ಪಾತ್ರನಾಗುತ್ತಾನೆ. ಕ್ರಿ. ಶ. ೧೮೫೭ ನೇ ಇಸ್ವಿ ಅಕ್ಟೋಬರ ತಿಂಗಳು ೨೫ ನೇ ತಾರೀಖಿನಂದು ಶ್ರೀ ಗುರು ಚನ್ನಬಸವ ಶಿವಾಚಾರ್ಯ ಸ್ವಾಮಿಗಳು ಬಾಲಕ ಪಡದಯ್ಯನನ್ನು ಅಧಿಕೃತವಾಗಿ ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿಕೊಳ್ಳುತ್ತಾರೆ. ಇವರನ್ನು ಶ್ರೀ ಹಿರೇಮಠದ

ಉತ್ತರಾಧಿಕಾರಿಗಳನ್ನಾಗಿ ಮಾಡುವ ಸಂದರ್ಭದಲ್ಲಿ ಬರೆಯಲ್ಪಟ್ಟ ಪಶ್ಚಾತ್ ಪತ್ರವು ಲಭ್ಯವಿರುತ್ತದೆ. ಈ ಪಶ್ಚಾತ್ ಪತ್ರವು ಶ್ರೀಯುತ ದೊಡ್ಡ ಸಿದ್ಧಯ್ಯನವರ ತಂದೆಯಾದ ಶ್ರೀಯುತ ಗುರುಸಿದ್ಧಯ್ಯನವರು ಮತ್ತು ಹಂಚಿನಾಳ ಶ್ರೀ ಹಿರೇಮಠದ ಆಗಿನ ಪಟ್ಟಾಧ್ಯಕ್ಷರಾಗಿದ್ದ ಶ್ರೀ ಗುರು ಚನ್ನಬಸವ ಶಿವಾಚಾರ್ಯ ಸ್ವಾಮಿಗಳು ಇವರುಗಳಿಂದ ಶಿರಕೋಳ ಗ್ರಾಮದ ಹಿರೇಮಠದ ಆಗಿನ ಪಟ್ಟದ ದೇವರು ಮತ್ತು ಬೆಟಸೂರು ಗ್ರಾಮದ ಹಿರೇಮಠದ ಆಗಿನ ಪಟ್ಟದ ದೇವರಾಗಿದ್ದ ಶ್ರೀ ಷ. ಬ್ರ. ಗುರುಶಾಂತ ಶಿವಾಚಾರ್ಯ ಸ್ವಾಮಿಗಳು ಇವರುಗಳ ದಿವ್ಯ ಸನ್ನಿಧಿಯಲ್ಲಿ ಇತರ ಸದ್ಭಕ್ತರ ಮತ್ತು ಗ್ರಾಮಸ್ತರ ಸಮಕ್ಷಮದಲ್ಲಿ ಬರೆಯಲ್ಪಟ್ಟಿರುತ್ತದೆ. ಶ್ರೀ ಗುರುವು ತನ್ನ ಶಿಷ್ಯನಿಗೆ ಅಧಿಕಾರವನ್ನು ಹಸ್ತಾಂತರಿಸಿದ ಸಂಗತಿಯನ್ನು ಸೂಚಿಸುವ ಆ ಪಶ್ಚಾತ್ ಪತ್ರವು ಈ ಕೆಳಗಿನಂತೆ ಇರುತ್ತದೆ.

|| ಶ್ರೀ ಸಿದ್ಧನಂಜೇಶ್ವರ ಪ್ರಸನ್ನ ||

ಶ್ರೀ ಮಹಾಮೇರು ಪರ್ವತಕ್ಕ ಮಿಗಿಲು, ಕಾಮದೇನು
ಕಲ್ಪವೃಕ್ಷ ಕಲಲತಿ ಚಿಂತಾಮಣಿ, ಪರುಷದ ಖಣಿ,
— — -.- —ಪರಹಿತಾರ್ಥ ಕೊಡುವದಕ್ಕ ಮೆಗ್ಗಳ
ನಾಮಾಂಕಿತವುಳ್ಳವರು, ಕ್ಸಬಾ ಹೂಲಿ ಹಂಚಿನಾಳ,
ವುಗರಗೋಳ, ಹಿರೇಕುಂಮ್ಮಿ ವಗೈರೆ ಸ್ಥಳಕ್ಕೆ ಅಧಿಕಾರಿ
ಗಳಾದ, ಆಚಾರ ವಿಚಾರ ಸದಾಚಾರ ಮೂರಕ್ಕೂ
ಕಾರಣ ಕರ್ತೃಗಳಾದ ಹಿರೇಮಠದ ಪಟ್ಟದ ದೇವರವರು—

ಶ್ರೀ ಮನ್ನೃಪ ಶಾಲಿವಾಹನ ಶಕೆ ೧೭೭೯ ವರ್ಷ ಪಿಂಗಲ ನಾಮ ಸಂವತ್ಸರಶ್ಯ ಕಾರ್ತಿಕ ಶುಕ್ಲ— — — — —ದಿವಸ ನಮ್ಮ ವೃದ್ಧಾಪ್ಯ ಕಾಲ ಆದ ಕಾರಣ ನಮ್ಮ ಪರಂಪಾರ ಮಠದ ರಿವಾಜ ಪ್ರಕಾರ ನಮ್ಮ ಚಿರಂಜೀವ ದೊಡ್ಡ ಸಿದ್ಧಯ್ಯ ಬಿನ್ನ ಗುರುಸಿದ್ಧಯ್ಯ ಇತನ ದ್ವಿತಿಯ ಪುತ್ರ ಚನ್ನಬಸಯ್ಯ ಎಂಬವನ್ನ ನಮ್ಮ ರಿವಾಜ ಪ್ರಕಾರ ಶಿರಕೋಳದ ಪಟ್ಟದ ದೇವರವರು ಹಾಗೂ ಬೆಟಸೂರ ಪಟ್ಟದ ದೇವರವರು ವಗೈರೆರನ್ನು ಹಾಗೂ ನಮ್ಮ ಸ್ಥಳದ ಶಿಷ್ಯ ಮಂಡಳಿ ವಗೈರೆ ಗ್ರಾಮಸ್ತರು ಮುಂತಾದವರ ಸಹಿತ ಕೂಡಿಸಿಕೊಂಡು ನಮ್ಮ ಆತ್ಮ ಸಂತೋಷದಿಂದ ವ ಅಕಲ ಹುಷಾರಿಯಿಂದ ರಿವಾಜಿನಂತೆ

ನಮ್ಮ ಉತ್ತರಾಧಿಕಾರ ಮುರವು ಮುದ್ರಾ ಮುಂತಾದ್ದು ನಮ್ಮ ಪೂರ್ವದ ವಹಿವಾಟ ಪ್ರಕಾರ ಯಾವತ್ತೂ ನಮ್ಮ ಮಠಗಳ ಹಾಗೂ ಶಿಷ್ಯ ಮಕ್ಕಳು, ಇನಾಮು ಜಮೀನು ವಗೈರೆ ಹಕ್ಕು ಬಾಬ ಯಾವತ್ತಕ್ಕೂ ಬಾಧ್ಯಸ್ಥನಾಗಿ ಅನುಭವ ಮಾಡಿಕೊಂಡು ಆಚಾರ ವಿಚಾರದಿಂದ ಸುರಕ್ಷಿತ ಇರಬೇಕು ಎಂದು ಬರಕೊಟ್ಟ ಪತ್ರ ಸಹಿ ತಾರೀಖು ೨೫ ನೇ ಮಾಹೆ ಅಗಟಬರ ಸನ್ ೧೮೫೭ ಇಸ್ವಿ - - - - ಸನ್ ೧೯೬೭ - - - - ಪಟ್ಟದ ಅಧಿಕಾರ ಮಾಡಿದ ಸ್ಥಳ: ಮಠ, ಮೊಜೆ ಹಂಚಿನಾಳ, ತಾಲೂಕ: ಪರಸಗಡ, ಜಿಲ್ಲಾ: ಬೆಳಗಾಂವ, ಹಸ್ತಾಕ್ಷರ: ಗೋವಿಂದ ವೆಂಕಾಜಿ ಕುಲಕರ್ಣಿ.

ಪಟ್ಟಾಧ್ಯಕ್ಷರ ಸಹಿ
ಮತ್ತು
ಇತರರ ಸಹಿಗಳು

---

(ಈ ಕಾಗದದ ಮೂಲ ಪ್ರತಿಯಲ್ಲಿ ಕನ್ನಡ ಅಂಕಿಗಳನ್ನು ಬಳಸಿರುವರು).

ಈ ರೀತಿಯಾಗಿ ಶ್ರೀ ಗುರುವಿನಿಂದ ಶ್ರೀ ಹಿರೇಮಠದ ಪಟ್ಟದ ಅಧಿಕಾರವನ್ನು ಪಡೆದ ವಟು ಪಡದಯ್ಯನು "ಶಿವಾಚಾರ್ಯ" ಎಂದೆನಿಸಿಕೊಳ್ಳುತ್ತಾರೆ. ಚಿಕ್ಕ ವಯಸ್ಸಿನವರಾಗಿದ್ದ ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯ ಸ್ವಾಮಿಗಳು ತಮ್ಮ ಗುರುವಿನ ಮಾರ್ಗದರ್ಶನದಲ್ಲಿ ಸಾಧನೆಯನ್ನು ಮತ್ತು ಮಠದ ಕಾರ್ಯಗಳನ್ನು ಮುಂದುವರಿಸುತ್ತಾರೆ. ಇವರು ಪ್ರಾಪ್ತವಯಸ್ಕರಾಗುವುದಕ್ಕಿಂತ ಪೂರ್ವದಲ್ಲಿಯೇ ಅಂದರೆ ಸುಮಾರು ಕ್ರಿ. ಶ. ೧೮೫೯ ರಲ್ಲಿ ಇವರ ಗುರುಗಳು ಕಣ್ಮರೆಯಾಗುತ್ತಾರೆ. ಇವರಿನ್ನೂ ಅಲ್ಪ ವಯಸ್ಸಿನವರಿದ್ದುದರಿಂದ ಇವರ ಪರವಾಗಿ ಇವರ ಪೂರ್ವಾಶ್ರಮದ ಹತ್ತಿರದ ಸಂಬಂಧಿಕರಾದ (ಇವರ ಕಾಕಾ) ಶ್ರೀಯುತ ಸಣ್ಣಸಿದ್ಧಯ್ಯನವರು ಮಠದ ಎಲ್ಲ ವ್ಯವಹಾರಗಳನ್ನು ನೋಡಿಕೊಳ್ಳುತ್ತಿರುತ್ತಾರೆ. ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯ ಸ್ವಾಮಿಗಳು ತಾವು ವಯಸ್ಸಿಗೆ ಬಂದ ನಂತರ ಅಂದರೆ ಕ್ರಿ. ಶ. ೧೮೬೫ರಲ್ಲಿ ಶ್ರೀ ಹಿರೇಮಠದ ಎಲ್ಲ ವ್ಯವಹಾರಗಳನ್ನು ತಮಗೆ ಒಪ್ಪಿಸುವಂತೆ ಶ್ರೀಯುತ ಸಣ್ಣ ಸಿದ್ಧಯ್ಯ

ನವರನ್ನು ಕೇಳುತ್ತಾರೆ. ಆದರೆ ಶ್ರೀಯುತ ಸಣ್ಣಸಿದ್ಧಯ್ಯನವರು ಇದಕ್ಕೆ ಒಪ್ಪುವುದಿಲ್ಲ. ಆಗ ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯ ಸ್ವಾಮಿಗಳು ಕೋರ್ಟಿನ ಸಹಾಯ ಪಡೆದು ಕೋರ್ಟಿನ ತೀರ್ಪಿಗೆ ಅನುಗುಣವಾಗಿ ಮಠವನ್ನು ಮತ್ತು ಮಠದ ಅಧಿಕಾರವನ್ನು ಮರಳಿ ಪಡೆದುಕೊಳ್ಳುವಲ್ಲಿ ಯಶಸ್ವಿಯಾಗುತ್ತಾರೆ. ಧಾರವಾಡ ಜಿಲ್ಲೆಯ ಸವದತ್ತಿ ಮುನಶಿ ಕೊರತ್ತಿನಲ್ಲಿ (ಅಂದರೆ ಸವದತ್ತಿ ಮುನಶಿ ಕೋರ್ಟಿನಲ್ಲಿ) ಶ್ರೀಗುರು ಚನ್ನಬಸವ (ಉರ್ಫ ಪಡದಯ್ಯ)ಶಿವಾಚಾರ್ಯ ಸ್ವಾಮಿಗಳು ಈ ಕಾರಣಕ್ಕಾಗಿ ಹೂಡಿದ ಅಸಲ ದಾವಾ ನಂಬರ ೩೭೧ : ೧೮೬೬ ಇದರ ತೀರ್ಪಿನ ನಕಲು ಲಭ್ಯವಿರುತ್ತವೆ. (ಆ ಕಾಲದಲ್ಲಿ ಸವದತ್ತಿ ತಾಲೂಕವು ಬೆಳಗಾಂವ ಜಿಲ್ಲೆಯಲ್ಲಿ ಇದ್ದರೂ ಸಹಿತ ಈ ತಾಲೂಕಿನ ನ್ಯಾಯಾಂಗ ಆಡಳಿತವು ಧಾರವಾಡ ಜಿಲ್ಲೆಗೆ ಸಂಬಂಧ ಪಟ್ಟಿತ್ತು. ನಂತರ ಕ್ರಿ. ಶ. ೧೮೭೯ ರಲ್ಲಿ ಈ ವ್ಯವಸ್ಥೆಯು ಬದಲಾಗಿ ಸವದತ್ತಿ ತಾಲೂಕಿನ ನ್ಯಾಯಾಂಗದ ಆಡಳಿತವು ಬೆಳಗಾಂವ ಜಿಲ್ಲೆಗೆ ವರ್ಗಾಯಿಸಲ್ಪಡುತ್ತದೆ. ಈ ಸಂಗತಿಯು ನಮಗೆ ಬೆಳಗಾಂವ ಜಿಲ್ಲೆಯ ಇತಿಹಾಸದಿಂದ ತಿಳಿಯುತ್ತದೆ )

ಈ ಮೇಲೆ ತಿಳಿಸಿದ ಪಶ್ಚಾತ್ ಪತ್ರದ ಪ್ರಾರಂಭದಲ್ಲಿ "ಶ್ರೀ ಸಿದ್ಧನಂಜೇಶ್ವರ ಪ್ರಸನ್ನ"ಎಂಬುದಾಗಿ ಬರೆದಿರುವುದು ಕುತೂಹಲವನ್ನು ಕೆರಳಿಸುವ ಸಂಗತಿಯಾಗಿದೆ. ಹೂಲಿ ಗ್ರಾಮದಲ್ಲಿ "ಸಿದ್ಧನಂಜೇಶ ಮಠ'' ಎಂಬ ಹೆಸರಿನ ಒಂದು ಮಠವು ಇರುವುದು. ಇದೂ ಅಲ್ಲದೇ ಖ್ಯಾತ ಕವಿಯೂ ಹಾಗೂ ರಾಘವಾಂಕ ಕಾವ್ಯದ ಲೇಖಕನೂ ಆಗಿರುವ ಚಿಕ್ಕನಂಜೇಶ ಎಂಬವನು ಮೂಲತಃ ಹೂಲಿ ಗ್ರಾಮದವನು ಎಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ಅದೇ ರೀತಿಯಾಗಿ ಹಂಚಿನಾಳ ಮತ್ತು ಹೂಲಿಯ ಹಿರೇಮಠಗಳೆರಡೂ ಶ್ರೀ ಕಾಶೀ ಜ್ಞಾನಪೀಠ ಪರಂಪರೆಯಲ್ಲಿ ನಡೆದು ಬಂದಿರುವ ಮಠಗಳು ಎಂಬುದು ಇಲ್ಲಿ ಗಮನಾರ್ಹವಾಗಿರುವ ಸಂಗತಿ.

## ಗುರು–ವಿರಕ್ತರ ಸುಮಧುರ ಬಾಂಧವ್ಯ

ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯ ಸ್ವಾಮಿಗಳನ್ನು ಹಂಚಿನಾಳ ಶ್ರೀ ಹಿರೇಮಠದ ಉತ್ತರಾಧಿಕಾರಿಗಳನ್ನಾಗಿ ನೇಮಕ

ಮಾಡುವ ಸಂದರ್ಭದಲ್ಲಿ, ಅಂದರೆ ಕ್ರಿ. ಶ. ೧೮೪೭ ರಲ್ಲಿ, ನವಲಗುಂದ ತಾಲೂಕಿನ ಶಿರಕೋಳ ಗ್ರಾಮದ ಹಿರೇಮಠದ ಆಗಿನ ಪಟ್ಟಾಧ್ಯಕ್ಷರು, ಮತ್ತು ಸವದತ್ತಿ ತಾಲೂಕಿನ ಜೆಟಸೂರ ಗ್ರಾಮದ ಹಿರೇಮಠದ ಆಗಿನ ಪಟ್ಟಾಧಕ್ಷರಾಗಿದ್ದ ಶ್ರೀ ಷ.ಬ್ರ. ಗುರುಶಾಂತ ಶಿವಾಚಾರ್ಯ ಸ್ವಾಮಿಗಳು ಹಂಚಿನಾಳದ ಶ್ರೀ ಹಿರೇಮಠಕ್ಕೆ ದಯಮಾಡಿಸಿದ್ದುದನ್ನು ಗಮನಿಸಿದರೆ ಹಂಚಿನಾಳ ಹಿರೇಮಠದ ಶ್ರೀಗಳು, ಶಿರಕೋಳ ಮತ್ತು ಜೆಟಸೂರ ಹಿರೇಮಠಗಳ ಶ್ರೀಗಳೊಡನೆ ಒಳ್ಳೆಯ ಆತ್ಮೀಯ ಸಂಬಂಧವನ್ನು ಹೊಂದಿದ್ದರೆಂಬುದು ತಿಳಿದು ಬರುತ್ತದೆ.

ಕ್ರಿ. ಶ. ೧೮೮೧ ರಲ್ಲಿ ರಾಮದುರ್ಗ ತಾಲೂಕಿನ ಶಿವಪ್ಯಾಟೆಯ ವಿರಕ್ತ ಮಠದ ಆಗಿನ ಮಠಾಧಿಕಾರಿಗಳಾದ ಶ್ರೀ ಮ. ನಿ. ಪ್ರ. ಶಿವಮೂರ್ತಿಯ್ಯ ಸ್ವಾಮಿಗಳಿಂದ ಹಂಚಿನಾಳ ಶ್ರೀ ಹಿರೇಮಠದ ಪಟ್ಟದ್ದೇವರಿಗೆ ಒಂದು ಪತ್ರವು ಬಂದಿರುತ್ತದೆ. ಅವರು ಆ ಪತ್ರದ ಮುಖಾಂತರ ಶಿವಪ್ಯಾಟೆಯ ವಿರಕ್ತ ಮಠದಲ್ಲಿ ಶಿಂಗಿರಾಜ ಪುರಾಣವನ್ನು ಪ್ರಾರಂಭಿಸಿರುವುದಾಗಿಯೂ, ಮಾಘ ಶುದ್ಧ ೮, ಗುರುವಾರ ದಿವಸ ಪುರಾಣ ಮಂಗಲವಾಗುವುದಿದ್ದು, ಆ ದಿವಸ ಮಹಾಗಣಾರಾಧನೆ ಮತ್ತು ಪುರಾಣ ಮೆರವಣಿಗೆ ಉತ್ಸವ ಕಾರ್ಯವನ್ನು ಹಮ್ಮಿಕೊಂಡಿರುವುದಾಗಿಯೂ ತಿಳಿಸಿ, ಆ ಮಹಾಗಣಾರಾಧಣೆಗೆ ದಯ ಮಾಡಿಸಬೇಕು ಎಂಬುದಾಗಿ ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಿಗೆ ಕೇಳಿಕೊಂಡಿರುತ್ತಾರೆ.

ಇದೇ ರೀತಿ ಕ್ರಿ. ಶ. ೧೮೮೩ ನೇ ಇಸ್ವಿಯಲ್ಲಿ ಗಲಗಲಿ ಗ್ರಾಮದ ಹಿರೇಮಠದ ಆಗಿನ ಪಟ್ಟಾಧ್ಯಕ್ಷರಾಗಿದ್ದ ಶ್ರೀ ಷ. ಬ್ರ. ವೀರಭಿಕ್ಷಾವೃತ್ತಿ ಚರಂತಯ್ಯ ಶಿವಾಚಾರ್ಯ ಸ್ವಾಮಿಗಳಿಂದ ಹಂಚಿನಾಳ ಹಿರೇಮಠದ ಪಟ್ಟಾಧ್ಯಕ್ಷರಿಗೆ ಬಂದಿರುವ ಒಂದು ಪತ್ರವು ಈ ಕೆಳಗಿನಂತೆ ಇರುತ್ತದೆ. (ಇಲ್ಲಿ ಹೇಳಲ್ಪಟ್ಟಿರುವ ಗಲಗಲಿ ಗ್ರಾಮವು ವಿಜಾಪುರ ಜಿಲ್ಲೆಯ ಬೀಳಗಿ ತಾಲೂಕಿನಲ್ಲಿರುವ ಗಲಗಲಿ ಗ್ರಾಮ ಇದ್ದಿರಬಹುದು.)

|| ಶ್ರೀ ಗುರು ಪ್ರಸನ್ನ ||

ಶ್ರೀ ಮಘಸಲಿಂಗ ಚರ ಚಕ್ರವರ್ತಿ ರಾಜಾದಿ-
ರಾಜ ಪೂಜಿತ ಹಂಚಿನಾಳ ಹಿರೇಮಠದ ಪಟ್ಟದ್ದೇವರಿಗೆ-

ತೆಮ್ಮಗಲಗಲಿ ಹಿರೇಮಠದ ಶ್ರೀ ವೀರಭಿಕ್ಷಾವೃತ್ತಿ ಚರಂತೆಪ್ಪನವರು ಮಾಡುವ ಬಿಂನ : – – – ಶ್ರೀ ಮನ್ನೃಪ ಶಾಲಿವಾಹನ ಶಕೆ ೧೮೦೫ ನೇ ಸುಭಾನುನಾಮ ಸಂವತ್ಸರ ಚೈತ್ರ ಶುದ್ಧ ಎರಡು ಸೋಮವಾರದವರಿಗೂ ಸ್ವಸ್ಥಳದಲ್ಲಿ ಲಿಂಗಾನಂದದೊಳಿದ್ದೇವೆ. ನಿಂಮ ಲಿಂಗಾನಂದ ಸೌಖ್ಯೋದಯ ವನ್ನು ತಿಳಿಸುತ್ತಿರಬೇಕು. ಸಾಂಪ್ರತು ಯಿಗ ಯಿಲ್ಲಿ ಮಠದಲ್ಲಿ ಸಹಸ್ರ ಗಣಾ ರಾಧನೆ ಮಾಡುವದು ಯಿದೆ. ಮುಂದೆ ವೈಶಾಖ ಶುದ್ಧ ೩ ಬುಧವಾರ ದಿವಸ ನೇಮಕ ಮಾಡಿರುತ್ತದೆ. ತತ್ಪ್ರಯುಕ್ತ ನಿಂವು ಅಗತ್ಯ ಬಂದು ಯಿ ಮಹಾ ಕಾರ್ಯ ಸಾಂಗೋಪಾಂಗ ಮಾಡಿಸಿ ನಿಂಮ ಪಾಲಿಗೆ ಕೀರ್ತಿ ತೆಗೆದುಕೊಂಡು ಹೋಗಬೇಕು. ಯಿ ಕಾರಣ ನಿಂಮದೆ ಯಿರುತ್ತದೆ. ಪದಚಾರ ಬರಿಯು ತಕ್ಕದ್ದು ಯೆನದೆ ? ಇತಿ ಬಿನ್ನ :

---

ಇದೇ ರೀತಿಯಾಗಿ ಕ್ರಿ. ಶ. ೧೮೬೭ ನೇ ಇಸ್ವಿಯಲ್ಲಿ ಚಿನ್ಮೂಲಾದ್ರಿಯ ಶೂನ್ಯ ಸಿಂಹಾಸನ ಬೃಹನ್ಮಠದ ಚರಮೂರ್ತಿಗಳಾದ ಶ್ರೀ ಸಿದ್ಧರಾಮ ದೇಶಿಕೇಂದ್ರ ಸ್ವಾಮಿಗಳಿಂದ ಹಂಚಿನಾಳಕ್ಕೆ ಒಂದು ಪತ್ರವು ಬಂದಿರುತ್ತದೆ. ಆ ಪತ್ರವು ಸವದತ್ತಿ ತಾಲೂಕಿನ ಉಗರಗೋಳ ಗ್ರಾಮದಲ್ಲಿರುವ ವಿರಕ್ತ ಮಠದ ಲಿಂಗೈಕ್ಯ ಶ್ರೀ ಮ ನಿ ಪ್ರ. ನಿರ್ವಾಣೆಯ್ಯ ಸ್ವಾಮಿಗಳಿಗೆ ಸಂಬಂಧಿಸಿದ ವಿಷಯುವನ್ನು ಒಳಗೊಂಡಿರುತ್ತದೆ. ಉಗರಗೋಳ ಗ್ರಾಮದ ವಿರಕ್ತಮಠದ ಅಧಿಕಾರಿಗಳಾದ ಶ್ರೀ ಮ. ನಿ. ಪ್ರ ಚನ್ನಮಲ್ಲಯ್ಯ ಸ್ವಾಮಿಗಳು ಲಿಂಗೈಕ್ಯ ರಾಗಿರುತ್ತಾರೆ. ಅವರ ತರುವಾಯ ಅವರ ಉತ್ತರಾಧಿಕಾರಿಯಾಗಿ ಆ ಮಠಕ್ಕೆ ಇನ್ನೂ ಯಾರೂ ನೇಮಿಸಲ್ಪಟ್ಟಿರುವದಿಲ್ಲ. ಯಾರನ್ನು ನೇಮಿಸಬೇಕೆಂಬುದು ವಿವಾದಾಸ್ಪದವಾದ ಸಂಗತಿಯಾಗಿರುತ್ತದೆ. ಆ ಸಂದರ್ಭದಲ್ಲಿ ಉಗರಗೋಳ ಗ್ರಾಮದ ಸಮಸ್ತ ದೈವದವರು ಮತ್ತು ಹಂಚಿನಾಳ ಗ್ರಾಮದ ಸಮಸ್ತ ದೈವದವರು ಕೂಡಿಕೊಂಡು ಹಂಚಿನಾಳ ಹಿರೇಮಠದಿಂದ ಚಿನ್ಮೂಲಾದ್ರಿಯ ಬೃಹನ್ಮಠದ ಚರಮೂರ್ತಿ ಶ್ರೀ ಸಿದ್ಧರಾಮ ದೇಶಿಕೇಂದ್ರ ಸ್ವಾಮಿಗಳಿಗೆ ಒಂದು ಬಿನ್ನ : ಪತ್ರವನ್ನು ಬರೆಯಿಸಿರುತ್ತಾರೆ. ಈಗಾಗಲೇ ಉಗರಗೋಳ ಗ್ರಾಮದ ವಿರಕ್ತ ಮಠದ ಮರಿಗಳಾಗಿರುವ ಶ್ರೀ ನಿರ್ವಾಣೆಪ್ಪ ಉರ್ಫ ಶಿವರುದ್ರ

ದೇವರವರಿಗೆ ಆ ವಿರಕ್ತ ಮಠದ ಉತ್ತರಾಧಿಕಾರಿಗಳನ್ನಾಗಿ ನೇಮಿಸಲು ಅನುಮತಿಯನ್ನು ದಯಪಾಲಿಸಬೇಕೆಂಬುದಾಗಿ ಆ ಪತ್ರದ ಮುಖಾಂತರವಾಗಿ ಕೇಳಿ ಕೊಂಡಿರುತ್ತಾರೆ. ಈ ಬಿನ್ನ : ಪತ್ರಕ್ಕೆ ಉತ್ತರ ರೂಪವಾಗಿ ಈ ಮೇಲೆ ತಿಳಿಸಿದ ಪತ್ರವು ಚಿನ್ಮೂಲಾದ್ರಿಯ ಬೃಹನ್ಮಠದಿಂದ ಹಂಚಿನಾಳಕ್ಕೆ ಕ್ರಿ. ಶ. ೧೮೭೬ ನೇ ಇಸ್ವಿಯಲ್ಲಿ ಬಂದಿರುತ್ತದೆ. ಈ ಮೇಲೆ ತಿಳಿಸಿದ ಪತ್ರವು ಹಂಚಿನಾಳದ ಶ್ರೀಯುತ ಚರಂತಯ್ಯ ದೊಡ್ಡಸಿದ್ಧಯ್ಯ ಹಿರೇಮಠ (ಇವರು ಗೃಹಸ್ಥಾಶ್ರಮಿಗಳು) ಮತ್ತು ಹಂಚಿನಾಳ ಹಾಗೂ ಉಗರಗೋಳ ಗ್ರಾಮದ ಶೆಟ್ಟರು, ಗೌಡರು, ಶಾನಭೋಗರು ಮುಂತಾದ ಸಮಸ್ತ ದೈವದವರಿಗೆ ಬಂದಿರುತ್ತದೆ. ಆ ಪತ್ರದಲ್ಲಿ ಚಿನ್ಮೂಲಾದ್ರಿಯ ಬೃಹನ್ಮಠದ ಪದ್ಧತಿಯ ಪ್ರಕಾರ ಕಾಣಿಕೆಯನ್ನು ಸ್ವೀಕರಿಸಿ ಶ್ರೀ ನಿರ್ವಾಣಪ್ಪ ಉರ್ಫ ಶಿವರುದ್ರ ದೇವರವರಿಗೆ ಉಗರಗೋಳದ ವಿರಕ್ತಮಠದ ಚರಂತಿಗಿ ಅಧಿಕಾರವನ್ನು ದಯ ಪಾಲಿಸಿರುವುದಾಗಿ ಚಿನ್ಮೂಲಾದ್ರಿ ಬೃಹನ್ಮಠದ ಶ್ರೀಗಳವರು ತಿಳಿಸಿರುವರು. ಈಗ ಚಿತ್ರದುರ್ಗ ಎಂಬುದಾಗಿ ಕರೆಯಲ್ಪಡುವ ಪಟ್ಟಣದ ಪ್ರಾಚೀನ ಕಾಲದ ಹೆಸರು ಚಿನ್ಮೂಲಾದ್ರಿ ಎಂಬುದಾಗಿ ಇತ್ತೆಂಬುದನ್ನು ನಾವಿಲ್ಲಿ ಸ್ಮರಿಸಿಕೊಳ್ಳ ಬಹುದಾಗಿದೆ.

ಶ್ರೀ ಮ. ನಿ. ಪ್ರ. ನಿರ್ವಾಣೇಶ್ವರ ಸ್ವಾಮಿಗಳ ತರುವಾಯ ಶ್ರೀ ಮ. ನಿ. ಪ್ರ. ವೀರಸಂಗಯ್ಯ ಸ್ವಾಮಿ ಎಂಬವರು ಉಗರಗೋಳದ ಈ ವಿರಕ್ತ ಮಠಕ್ಕೆ ಅಧಿಕಾರಿಗಳಾದರು ಅವರು ತಮ್ಮ ಜೀವಿತ ಅವಧಿಯ ಕೊನೆಯ ವರೆಗೂ ಈ ಮಠದ ಅಭಿವೃದ್ಧಿಗಾಗಿ ಶ್ರಮಿಸಿದರು. ಇವರ ತರುವಾಯ ಸದರಿ ಮಠಕ್ಕೆ ಚಿಕ್ಕುಂಬಿ ಗ್ರಾಮದವರಾದ "ಶ್ರೀ ಮ. ನಿ. ಪ್ರ. ಗುರು- ಬಸಯ್ಯ ಸ್ವಾಮಿ" ಎಂಬವರು ಅಧಿಕಾರಿಗಳಾದರು. ಕೆಲ ಕಾಲದ ನಂತರ ಇವರು ಉಗರಗೋಳ ಗ್ರಾಮದ ಐದು ಜನ ಪಂಚರಿಗೆ ಮಠದ ಆಡಳಿತಾಧಿ ಕಾರವನ್ನು ವಹಿಸಿಕೊಟ್ಟು ತಮ್ಮ ಸ್ವ ಇಚ್ಛೆಯ ಪ್ರಕಾರ ಮಠವನ್ನು ತ್ಯಾಗ ಮಾಡಿ ಹೊರಟು ಹೋದರು. ಈಗ ಅಂದರೆ ಕ್ರಿ. ಶ. ೧೯೮೬ ರಲ್ಲಿ ಉಗರ ಗೋಳ ಗ್ರಾಮದ ಸಮಸ್ತ ದೈವದವರು ತೊರಗಲ್ಲ ಗಚ್ಚಿನ ಹಿರೇಮಠದ ಪಟ್ಟಾಧ್ಯಕ್ಷರಾದ ಶ್ರೀ ಮ. ಘ. ಚ. ಚನ್ನಮಲ್ಲ ಶಿವಾಚಾರ್ಯ ಸ್ವಾಮಿಗಳ ನೇತೃತ್ವದಲ್ಲಿ ಬೈಲಹೊಂಗಲ ತಾಲೂಕ ಬೈಲವಾಡ ಗ್ರಾಮದವರಾದ

ಶ್ರೀ ಮಹಾಂತ ದೇವರನ್ನು ಶಿವಯೋಗ ಮಂದಿರದಿಂದ ಕರೆದುಕೊಂಡು ಬಂದು ಸದರಿ ಮಠಕ್ಕೆ ಉತ್ತರಾಧಿಕಾರಿಗಳೆಂದು ನಿಶ್ಚಯ ಮಾಡಿರುತ್ತಾರೆ ಮತ್ತು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಅವರನ್ನು ಪಂಚಪೀಠಗಳಲ್ಲೊಂದಾಗಿರುವ ಶ್ರೀ ಕಾಶೀಕ್ಷೇತ್ರದ ಜಂಗಮವಾಡಿ ಮಠಕ್ಕೆ ಕಳಿಸಿರುತ್ತಾರೆ. (ಲಿಂಗೈಕ್ಯ ಶ್ರೀ ಮ. ನಿ. ಪ್ರ. ನಿರ್ವಾಣೇಶ್ವರ ಸ್ವಾಮಿಗಳ ನಂತರದ ಕಾಲದ ಈ ಉಗರಗೋಳ ವಿರಕ್ತಮಠದ ಐತಿಹಾಸಿಕ ಮಾಹಿತಿಯು ಈ ಮಠದ ಸದ್ಭಕ್ತರಾಗಿರುವ ಶ್ರೀಯುತ ನಿಂಗಪ್ಪ ಸಂಗಪ್ಪ ಹನಸಿ ಇವರಿಂದ ದಿ. ೧೧-೪-೧೯೯೧ ರಂದು ಅಧಿಕೃತವಾಗಿ ದೊರೆಯಿತು.)

ಇದೂ ಅಲ್ಲದೇ ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯ ಸ್ವಾಮಿಗಳು ನವಿಲುಗುಂದ ಗವಿಮಠದ ಆಗಿನ ಮಠಾಧಿಕಾರಿಗಳ ಜೊತೆಗೆ ಮತ್ತು ಹಳೇ ಹುಬ್ಬಳ್ಳಿಯ ಪಂಚಗೃಹ ಹಿರೇಮಠದ ಆಗಿನ ಪಟ್ಟಾಧ್ಯಕ್ಷರಾಗಿದ್ದ ಶ್ರೀ ಷ. ಬ್ರ. ಸಂಗನಬಸವ ಶಿವಾಚಾರ್ಯ ಸ್ವಾಮಿಗಳ ಜೊತೆಗೆ ನಿಕಟ ಸಂಪರ್ಕವನ್ನು ಹೊಂದಿದ್ದರೆಂಬುದೂ ಸಹ ತಿಳಿದು ಬರುತ್ತದೆ.

ಈ ಮೇಲೆ ತಿಳಿಸಲಾಗಿರುವ ಎಲ್ಲ ಪತ್ರ ವ್ಯವಹಾರಗಳನ್ನೂ ಗಮನಿಸಿದರೆ ಆಗಿನ ಕಾಲದಲ್ಲಿ ಗುರು-ವಿರಕ್ತ ಎಂಬ ತಾರತಮ್ಯವಿಲ್ಲದೇ ಪಟ್ಟದ್ದೇವರುಗಳು ಮತ್ತು ಮಠಾಧಿಕಾರಿಗಳ ಮಧ್ಯದಲ್ಲಿ ಸುಮಧುರವಾದ ಬಾಂಧವ್ಯವು ಇತ್ತೆಂಬ ಸಂಗತಿಯು ವ್ಯಕ್ತವಾಗುತ್ತದೆ. ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರುಗಳು ಸಮದರ್ಶಿಗಳಾಗಿದ್ದರೆಂಬುದು ಇದರಿಂದ ಸ್ಪಷ್ಟವಾಗಿ ಗೋಚರಿಸುತ್ತದೆ. ಇಡೀ ವಿಶ್ವವು ಪರಮಾತ್ಮನಾಮಕವಾದ ಒಂದೇ ಒಂದು ಮಹಾಚೈತನ್ಯದಿಂದ ವ್ಯಾಪಿಸಲ್ಪಟ್ಟಿರುವುದನ್ನು ಸದಾವಕಾಲವೂ ಕಾಣುತ್ತಿರುವ ಜ್ಞಾನಿಗಳ ದೃಷ್ಟಿಗೆ ಹರಿ-ಹರ ಎಂಬ ತಾರತಮ್ಯವಾಗಲೀ ಅಥವಾ ಗುರು-ವಿರಕ್ತ ಎಂಬ ತಾರತಮ್ಯವಾಗಲೀ ಗೋಚರಿಸಲು ಸಾಧ್ಯವೆ ? ಗುರು-ವಿರಕ್ತ ತಾರತಮ್ಯವನ್ನು ಮರೆತು ಸರ್ವಸಮತೆಯ ವಿಶಾಲ ತತ್ತ್ವವನ್ನು ನಿಜ ಜೀವನದಲ್ಲಿ ಅಳವಡಿಸಿಕೊಂಡು ಬಾಳಿ ಬೆಳಗಿದ ಅವರ ಜೀವನ ರೀತಿಯು ಎಂದೆಂದಿಗೂ ಆದರ್ಶಮಯವಾಗಿ ಉಳಿಯುವುದರಲ್ಲಿ

ಸಂದೇಹವಿಲ್ಲ. ಈ ಸಂದರ್ಭದಲ್ಲಿ ಪಂಚಪೀಠಗಳಲ್ಲೊಂದಾಗಿರುವ ಶ್ರೀ ಶೈಲ ಪೀಠದ ಲಿಂಗೈಕ್ಯ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಹೃದಯ ತುಂಬಿ ಹಾಡಿದ ಈ ಕೆಳಗಿನ ಬಾಮಿನಿ ಷಟ್ಪದಿಯೊಂದು ನೆನಪಿಗೆ ಬರುತ್ತದೆ.

ಬೆಳಗು ಪಂಚಾಚಾರ್ಯ ತತ್ತ್ವವೆ।
ಬೆಳಗು ಬಸವನ ಭಕ್ತಿ ತತ್ತ್ವವೆ।
ಬೆಳಗು ವಿರತರ ಶೂನ್ಯ ತತ್ತ್ವವೆ ಸರ್ವಸಮತೆಯೊಳು ॥
ಬೆಳಗು ಜಂಗಮ ವಂಶ ದೀಪವೆ ।
ಬೆಳಗು ಭಕ್ತರ ವಂಶ ದೀಪವೆ ।
ಬೆಳಗು ದ್ವೇಷಾಸೂಯೆಗಳ ಕಡುಕತ್ತಲೆಯ ಕಳೆದು ॥

ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷ ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾಚಾರ್ಯರು ತಮ್ಮ ಪೂರ್ವಾಶ್ರಮದ ಸಹೋದರರಾಗಿದ್ದ ಶ್ರೀ ಯುತ ಚರಂತಯ್ಯನವರ ಪುತ್ರರಾದ ಪಡದಯ್ಯ ಎಂಬವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಕ್ರಿ. ಶ. ೧೮೮೪ನೇ ಇಸ್ವಿಯಲ್ಲಿ ನೇಮಿಸಿಕೊಳ್ಳುತ್ತಾರೆ.

## ಮೈಸೂರ ಸೀಮೆಯ ಚೀಫ್ ಕಮೀಶನರ ಕೋರ್ಟಿನ ತೀರ್ಪಿನ ನಕಲು

ಹಂಚಿನಾಳ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಕಾಗದಗಳ ಗಂಟಿನಲ್ಲಿ ಮೈಸೂರ ಸೀಮೆಯ ಚೀಫ್ ಕಮೀಶನರ ಸಾಹೇಬರವರ ಕೋರ್ಟಿನಲ್ಲಿ ಮಹಾ ಸಂಸ್ಥಾನ ಉಜ್ಜಯಿನಿ ಪೀಠದ ಜಗದ್ಗುರುಗಳಿಗೂ ಮತ್ತು ಹಾರೂವರಿಗೂ (ಬ್ರಾಹ್ಮಣರಿಗೂ) ನಡೆದ ಮಠ ಸಂಬಂಧದ ಫೈಸಲಿನ ಠರಾವಿನ ನಕಲು ಇರುತ್ತದೆ. ಈ ಕೇಸಿನಲ್ಲಿ ಮಹಾಸಂಸ್ಥಾನ ಉಜ್ಜಯಿನಿ ಪೀಠದ ಜಗದ್ಗುರುಗಳು ಮತ್ತು ಇತರರು ಅಪೀಲವಾದಿಗಳಾಗಿವರು. ಈ ಕೇಸು ಕ್ರಿ. ಶ. ೧೮೬೨ ರಲ್ಲಿಯೇ ಪ್ರಾರಂಭವಾಗಿರಬಹುದು. ಆದರೆ ಮೈಸೂರ ಸೀಮೆಯ ಚೀಫ್ ಕಮೀಶನರ ಕೋರ್ಟಿನ ತೀರ್ಪಿನ ಈ ನಕಲು ಕ್ರಿ. ಶ. ೧೮೮೨ನೇ ಇಸ್ವಿಯ ಸರಕಾರಿ ಹಾಳೆಗಳಲ್ಲಿ ಬರೆಯಲ್ಪಟ್ಟಿದೆ.

ಈ ತೀರ್ಪಿನ ನಕಲು ಚಿಕ್ಕ ಗಾತ್ರದ ಹದಿನೆಂಟು ಪುಟಗಳಲ್ಲಿ ಬರೆಯಲ್ಪಟ್ಟಿರುತ್ತದೆ. ಮುಖ ಪುಟದಲ್ಲಿ "ಹನಸಿ ಹಿರೇಮಠ" ಎಂಬುದಾಗಿ ಬರೆಯಲಾಗಿದೆ. ಬಹುಶಃ ಇದು ಹನಸಿಯ ಹಿರೇಮಠಕ್ಕೆ ಸಂಬಂಧಪಟ್ಟದ್ದು ಇರಬಹುದು. ಹನಸಿ ಹಿರೇಮಠದಿಂದ ಆ ನಕಲನ್ನು ಓದುವುದಕ್ಕಾಗಿ ಹಂಚಿನಾಳ ಹಿರೇಮಠದ ಪಟ್ಟಾಧ್ಯಕ್ಷರು ತರಿಸಿಕೊಂಡಿರಬಹುದು. ಈ ಕೇಸಿನಲ್ಲಿ "ವೀರಶೈವರು ಶೂದ್ರರೆ?" ಎಂಬ ವಿಷಯವು ಚರ್ಚೆಗೆ ಗುರಿಯಾಗಿದೆ. ಕೋರ್ಟಿನವರು ತಮ್ಮ ಅಂತಿಮ ತೀರ್ಪನ್ನು ನೀಡಿರುವರು. ವೀರಶೈವ ಧರ್ಮವು ಪ್ರಾಚೀನ ಪರಂಪರೆಯನ್ನು ಹೊಂದಿದ ಶ್ರೇಷ್ಠ ಮಟ್ಟದ ಧರ್ಮವಾಗಿರುವುದು ಎಂಬುದಾಗಿ ಕೋರ್ಟಿನವರು ತೀರ್ಮಾನಿಸಿರುವರು.

## ಶ್ರೀ ಷ.ಬ್ರ. ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು (ಶ್ರೀ ಗುರು ಪಡದಪ್ಪಜ್ಜನವರು)

ಸಾಯುವುದು ಸುಲಭ ಆದರೆ ಆದರ್ಶಕ್ಕಾಗಿ ಬದುಕುವುದು ಸುಲಭವಲ್ಲ. ಮಾನವೀಯತೆ, ದಯೆ, ಸತ್ಯ, ಅಹಿಂಸೆ.......ಇವೇ ಮುಂತಾದವುಗಳು ಆದರ್ಶಗಳಲ್ಲವೆ? ಇಂತಹ ಎಲ್ಲ ಆದರ್ಶಗಳನ್ನು ಒಳಗೊಂಡು, ಸಕಲ ಜೀವಾತ್ಮರಿಗೂ ಲೇಸನ್ನೇ ಬಯಸುವ ಉದ್ದೇಶದಿಂದ, ನೈಸರ್ಗಿಕ ಸತ್ಯಗಳನ್ನಾಧರಿಸಿ ರೂಪುಗೊಂಡಿರುವುದೇ "ಧರ್ಮ" ಎಂದೆನಿಸಿಕೊಳ್ಳುತ್ತದೆ. ನಿಜ ಜೀವನದಲ್ಲಿ ಆದರ್ಶವೇ ಬೇರೆ ಮತ್ತು ವಾಸ್ತವಿಕ ಸ್ಥಿತಿಯೇ ಬೇರೆ ಎಂಬ ಅರಿವು ನಮಗೆ ಆಗದೇ ಇರಲಾರದು. ಇದೇ ರೀತಿಯಾಗಿ ಧರ್ಮವೂ ಸಹ ನಿಜ ಜೀವನದಲ್ಲಿ ವಾಸ್ತವಿಕ ಸ್ಥಿತಿಗಿಂತ ಬಹಳಷ್ಟು ಭಿನ್ನವಾಗಿ ಕಂಡು ಬರುವುದು. ಹೀಗಾಗುವುದಕ್ಕೆ ಮುಖ್ಯ ಕಾರಣವೆಂದರೆ ವೈಯಕ್ತಿಕ ಹಿತಾಸಕ್ತಿಗಳಿಗಾಗಿ ಸಾರ್ವಜನಿಕ ಹಿತಾಸಕ್ತಿಗಳನ್ನು ಬಲಿಕೊಡುವ ಜನರೇ ಹೆಚ್ಚಿನ ಸಂಖ್ಯೆಯಲ್ಲಿ ಇರುವುದು. ಇಂತಹ ಜನರ ಕೈಯಲ್ಲಿ ಸಿಕ್ಕು ಧರ್ಮವು ಸತ್ತು ಹೋಗುತ್ತದೆ. ಸಕಲ ಜೀವಾತ್ಮರಿಗೂ ಲೇಸನ್ನು ಬಯಸುವುದೇ ಧರ್ಮದ ಮೂಲ ಉದ್ದೇಶವಾಗಿದ್ದರೂ ಸಹಿತ ಕೆಲವು ಜೀವಾತ್ಮರುಗಳಿಂದ ಆ ಧರ್ಮದ ಅಸ್ತಿತ್ವಕ್ಕೇನೇ ಧಕ್ಕೆ ಉಂಟಾಗುತ್ತದೆ. ಆದ್ದರಿಂದ ನಿಜ ಜೀವನದಲ್ಲಿ ಧರ್ಮವನ್ನು ರಕ್ಷಿಸಿ ಸಕಲ ಜೀವಾತ್ಮರಿಗೂ ಲೇಸನ್ನುಂಟು ಮಾಡುವ ವ್ಯಕ್ತಿಗಳ

ಅವಶ್ಯಕತೆಯು ಯಾವಾಗಲೂ ಇದ್ದೇ ಇರುತ್ತದೆ. ಸ್ವಾರ್ಥವನ್ನು ತ್ಯಾಗ ಮಾಡಿ ಸಾರ್ವಜನಿಕ ಹಿತವನ್ನು ಕಾಪಾಡುವುದಕ್ಕಾಗಿ ಯಾರು ಮುಂದಾಗುತ್ತಾರೆಯೋ ಅಂತವರನ್ನು ಮಾತ್ರ "ಧರ್ಮ ರಕ್ಷಕರು" ಎಂಬುದಾಗಿ ಸಮಾಜವು ಒಪ್ಪುತ್ತದೆ. "ಸಾಯುವುದು ಸುಲಭ, ಆದರೆ ಆದರ್ಶಕ್ಕಾಗಿ ಬದುಕುವುದು ಸುಲಭವಲ್ಲ" ಎಂಬ ಮಾತನ್ನು ಅರಿತುಕೊಳ್ಳಲು ನಾವು ಸಮರ್ಥರಾಗಿದ್ದರೆ; "ಸಂಸಾರ ತ್ಯಾಗ ಮಾಡಿ ಧರ್ಮ ರಕ್ಷಣೆಗಾಗಿ ಇಡೀ ಜೀವನವನ್ನೇ ಪಣಕ್ಕಿಟ್ಟು ಬದುಕುವುದು" ಎಷ್ಟೊಂದು ಕಠಿಣವಾದ ಮಾರ್ಗ ಎಂಬುದನ್ನು ಊಹೆ ಮಾಡಿ ತಿಳಿದುಕೊಳ್ಳಲು ನಾವು ಸಮರ್ಥರಾಗಬಹುದು. ಜನಸಾಮಾನ್ಯರಾಗಿರುವ ನಮಗೆ ಆ ರೀತಿ ಕಠಿಣವಾದ ಮಾರ್ಗದಲ್ಲಿ ನಡೆಯುವುದು ಬಲು ಕಷ್ಟ ಸಾಧ್ಯ ಎಂಬುದನ್ನು ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ. ಅಷ್ಟೇ ಏಕೆ ? ಆ ರೀತಿ ವೈರಾಗ್ಯ ಸಂಪನ್ನರಾಗಿ ಬದುಕುವುದು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಕೋಟಿಗೊಬ್ಬ ನಿಜವಾದ ವೈರಾಗ್ಯ ಪುರುಷನು ಜನಿಸುತ್ತಾನೆ. ಶಿವನ ಅಪ್ಪಣೆಯ ಮೇರೆಗೆ ಈ ಭೂಮಿಗಿಳಿದು ಬಂದ ಕೆಲವೇ ಕೆಲವು ವ್ಯಕ್ತಿಗಳಿಗೆ ಮಾತ್ರ ಈ ವೈರಾಗ್ಯ ಪೂರ್ಣ ಜೀವನವು ಸಾಧ್ಯವಾಗುವುದು ಎಂದು ಹೇಳಿದರೂ ತಪ್ಪಾಗಲಾರದು. ಆದ್ದರಿಂದಲೇ ಸಮಾಜವು ಸಂಸಾರ ತ್ಯಾಗ ಮಾಡಿ ಧರ್ಮರಕ್ಷಣೆ ಮಾಡುವವರನ್ನು ಶಿವನ ಅವತಾರಿಗಳೆಂದು ತಿಳಿದು, "ಶಿವಾಚಾರ್ಯರು" ಎಂದು ಕರೆದು ಗೌರವಿಸುತ್ತದೆ.

ಕೇವಲ ಕಾವಿ (ಕೆಂಪು) ಬಟ್ಟೆಯನ್ನು ಮೈಮೇಲೆ ಧರಿಸಿಕೊಂಡ ಮಾತ್ರಕ್ಕೆ ಯಾವುದೇ ವ್ಯಕ್ತಿಯು "ಸಂನ್ಯಾಸಿ" ಎನಿಸಿಕೊಳ್ಳಲಾರ. ಸಂನ್ಯಾಸಿ ಎನಿಸಿಕೊಂಡ ಮಾತ್ರಕ್ಕೆ "ಶಿವಾಚಾರ್ಯ" ಎಂದೆನಿಸಿಕೊಳ್ಳಲಾರ. ಯಾವುದೋ ಕಾರಣಕ್ಕಾಗಿ ಕಾವಿ ಬಟ್ಟೆ ಧರಿಸಿ ಸಂನ್ಯಾಸಿ ಆದವನು ಬಹಳ ದಿವಸಗಳ ವರೆಗೆ ಸಂನ್ಯಾಸಿಯಾಗಿ ಉಳಿಯಲಾರ. ಅಂತಹ ಕಪಟ ವೇಷ ಧಾರಿಗಳಿಂದ ಧರ್ಮ ರಕ್ಷಣೆಯ ಕಾರ್ಯವು ನಡೆಯಲು ಸಾಧ್ಯವಿಲ್ಲ. ಜನಸಾಮಾನ್ಯರಲ್ಲಿ ಸಹಜವಾಗಿ ಕಂಡು ಬರುವ ಕಾಮ, ಕ್ರೋಧಾದಿಗಳು ಆ ಕಪಟ ವೇಷಧಾರಿಗಳಲ್ಲಿ ಬುಗಿಲೆದ್ದು ಬಿಟ್ಟರೆ ಆಗ ಆತನ ಕಾವಿ ಬಟ್ಟೆಯ ರಹಸ್ಯವು ತಂತಾನೇ ಬಯಲಾಗಿ ಬಿಡುತ್ತದೆ. ಆತನಲ್ಲಿ ನಿಜವಾದ ಭಕ್ತಿ,

ಜ್ಞಾನ ಮತ್ತು ವೈರಾಗ್ಯಗಳು ಅಳವಟ್ಟಿದ್ದರೆ ಮಾತ್ರ ಆತನು ತಾನುಟ್ಟ ಕಾವಿ ಬಟ್ಟೆಯ ಮರ್ಯಾದೆಯನ್ನು ಕಾಪಾಡಿಕೊಳ್ಳಲು ಸಮರ್ಥನಾಗುತ್ತಾನೆ. ನಾವು ಈ ದಿಸೆಯಲ್ಲಿ ವಿಚಾರ ಮಾಡಿ ನೋಡಿದಾಗ ಲಿಂಗೈಕ್ಯ ಶ್ರೀ ಷ. ಬ್ರ. ಷಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿ ವೈರಾಗ್ಯದ ನಿಲುವು ಎಷ್ಟೊಂದು ಅಗಾಧವಾಗಿತ್ತೆಂಬುದು ನಮ್ಮ ಗಮನಕ್ಕೆ ಬರುತ್ತದೆ. ಅವರಲ್ಲಿದ್ದ ವೈರಾಗ್ಯ ಸಂಪತ್ತು ಅಪೂರ್ವವಾಗಿತ್ತು. ಅವರು ಶಿವಾಚಾರ್ಯರಾಗಿದ್ದರಷ್ಟೇ ಅಲ್ಲ; ಶಿವಾಚಾರ್ಯರುಗಳಿಗೆ ಆದರ್ಶಪ್ರಾಯರಾಗಿದ್ದರು. ಬಂಗಾರದ ಬಣ್ಣವನ್ನು ಹೊಂದಿರುವ ಪ್ರತಿಯೊಂದು ವಸ್ತುವೂ ಬಂಗಾರವಿರುತ್ತದೆ ಎಂದು ಹೇಳಲು ಬರುವದಿಲ್ಲ. ಅದು ಪರೀಕ್ಷೆಗೆ ಒಳಪಟ್ಟಾಗ ಮಾತ್ರ ನಿಜವೇನೆಂಬುದು ತಿಳಿಯುತ್ತದೆ. ಲಿಂಗೈಕ್ಯ ಶ್ರೀ ಗುರು ಷಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಜೀವನದಲ್ಲಿ ಅವರ ವೈರಾಗ್ಯದ ಸತ್ವ ಪರೀಕ್ಷೆ ನಡೆಸುವ ಅಪೂರ್ವವಾದ ಘಟನೆಯೊಂದು ಶಿವನ ಸಂಕಲ್ಪಾನುಸಾರವಾಗಿ ಜರುಗಿದಾಗ, ಅದನ್ನು ಸಮರ್ಥವಾದ ರೀತಿಯಲ್ಲಿ ಎದುರಿಸಿದ ಅವರು, ಪುಟಕ್ಕಿಟ್ಟ ಚಿನ್ನದಂತೆ ಹೊರಹೊಮ್ಮಿ "ವೈರಾಗ್ಯ ಮೂರ್ತಿ" ಗಳಾಗಿ ಕಂಗೊಳಿಸಿದರು. ಅಂತಹ ಶಿವಾಚಾರ್ಯರ ಬದುಕನ್ನು ಕುರಿತು ಸಾಧ್ಯವಿರುವ ಮಟ್ಟಿಗೆ ಸವಿಸ್ತಾರವಾಗಿ ತಿಳಿದುಕೊಳ್ಳೋಣ.

## ಜನನ

ಲಿಂಗೈಕ್ಯ ಶ್ರೀ ಷಟ್‌ಸ್ಥಲ ಬ್ರಹ್ಮ ಷಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಾಗಿದ್ದರು. ಇವರು ಯಾವ ಇಸ್ವಿಯಲ್ಲಿ ಜನಿಸಿದರು ಎಂಬುದು ಸ್ಪಷ್ಟವಾಗಿ ತಿಳಿದು ಬರುವದಿಲ್ಲ. ಇವರು ತಮ್ಮ ಗುರುಗಳ ಉತ್ತರಾಧಿಕಾರಿಗಳಾಗಿ ನೇಮಕಗೊಂಡ ವರ್ಷ, ತಿಂಗಳು ಮತ್ತು ದಿವಸವು ನಿಶ್ಚಿತವಾಗಿ ತಿಳಿದು ಬರುತ್ತದೆ. ಅದರ ಆಧಾರದ ಮೇಲಿಂದ ಇವರು ಸುಮಾರು ಕ್ರಿ. ಶ. ೧೮೭೦ ೭೫ರ ಮಧ್ಯದಲ್ಲಿ ಜನಿಸಿರಬಹುದೆಂದು ಊಹಿಸಬಹುದಾಗಿದೆ. ಶ್ರೀ ಗುರು ಚನ್ನಬಸವ (ಉರ್ಫ ಷಡದಯ್ಯ) ಶಿವಾಚಾರ್ಯ ಸ್ವಾಮಿಗಳ

ಪೂರ್ವಾಶ್ರಮದ ಸಹೋದರರಾಗಿದ್ದ ಶ್ರೀಯುತ ಚರಂತಯ್ಯನವರಿಗೆ ಇಬ್ಬರು ಧರ್ಮ ಪತ್ನಿಯರಿದ್ದುದು ತಿಳಿದು ಬರುತ್ತದೆ. ಮೊದಲನೆಯವರು ಸಾಂವಮ್ಮನವರು. ಎರಡನೆಯವರು ನೀಲಮ್ಮನವರು. ಚರಂತಯ್ಯ ಸಾಂವಮ್ಮ ದಂಪತಿಗಳ ಉದರದಿಂದ ಜನಿಸಿದ ಮಕ್ಕಳಲ್ಲಿ ಒಬ್ಬನೇ ಒಬ್ಬ ಮಗನು ಬದುಕಿ ಉಳಿಯುತ್ತಾನೆ. ಇನ್ನು ಚರಂತಯ್ಯ-ನೀಲಮ್ಮ ದಂಪತಿಗಳ ಉದರದಿಂದ ಇಬ್ಬರು ಗಂಡು ಮಕ್ಕಳು ಜನಿಸುತ್ತಾರೆ.ದೊಡ್ಡವನು ಮಳ್ಳಯ್ಯ(ಮರಳಯ್ಯ)· ಚಿಕ್ಕವನೇ ಪಡದಯ್ಯ(ಪಟದಯ್ಯ). ಈ ಪಡದಯ್ಯನನ್ನೇ ಶ್ರೀಗುರು ಚನ್ನಬಸವ (ಉರ್ಫಪಡದಯ್ಯ) ಶಿವಾಚಾರ್ಯ ಸ್ವಾಮಿಗಳು ತಮ್ಮ ಶಿಷ್ಯನನ್ನಾಗಿ ಮಾಡಿ ಕೊಳ್ಳುತ್ತಾರೆ. ಇವರನ್ನು ಶ್ರೀ ಹಿರೇಮಠಕ್ಕೆ ಉತ್ತರಾಧಿಕಾರಿ ಯನ್ನಾಗಿ ನೇಮಿಸುವ ಸಂದರ್ಭದಲ್ಲಿ ಇವರಿಗೆ ಮಹಾದೇವಯ್ಯ ಎಂಬು ದಾಗಿ ನಾಮಕರಣ ಮಾಡುತ್ತಾರೆ. ಆದರೂ ಸಹ ಇವರು ಪಡದಯ್ಯ ಎಂಬ ಹೆಸರಿನಿಂದಲೇ ಚಿರಪರಿಚಿತರಾಗುತ್ತಾರೆ. ಈಗಿನವರು ಇವರನ್ನು ಪಡದಪ್ಪಜ್ಜ ಎಂಬ ಹೆಸರಿನಿಂದ ಗುರ್ತಿಸುತ್ತಾರೆ.

## ಅಧಿಕಾರ ಸ್ವೀಕಾರ

ಪಡದಯ್ಯನವರು ಕ್ರಿ. ಶ. ೧೮೮೪ನೇ ಇಸ್ವಿಯ ಡಿಸೆಂಬರ ೨೫ ರಂದು ಹಂಚಿನಾಳ ಶ್ರೀ ಹಿರೇಮಠದ ಉತ್ತರಾಧಿಕಾರಿಗಳಾಗಿ ನೇಮಕಗೊಳ್ಳು ತ್ತಾರೆ. ಆ ಸಂದರ್ಭದಲ್ಲಿ ಬರೆಯಲ್ಪಟ್ಟ ಅಧಿಕಾರ ಹಸ್ತಾಂತರಿಸುವ ಪಶ್ಚಾತ್ ಪತ್ರವು ಲಭ್ಯವಿರುತ್ತದೆ. ಆ ಸಂದರ್ಭದಲ್ಲಿ ಹಂಚಿನಾಳ ಶ್ರೀ ಹಿರೇಮಠದಲ್ಲಿ ಮಠದ ಶಿಷ್ಯಮಂಡಳಿ, ಹಂಚಿನಾಳ ಹಾಗೂ ಸುತ್ತಮುತ್ತಲ ಊರುಗಳ ಗ್ರಾಮಸ್ಥರು ಹಾಜರ ಇರುತ್ತಾರೆ. ಇದೂ ಅಲ್ಲದೆ ಆ ಸಂದರ್ಭ ದಲ್ಲಿ ನವಿಲುಗುಂದ ಗವಿಮಠದ ಆಗಿನ ಮಠಾಧಿಕಾರಿಗಳು ಮತ್ತು ಗದ- ಗಲಿ ಹಿರೇಮಠದ ಆಗಿನ ಪಟ್ಟಾಧ್ಯಕ್ಷರುಗಳೂ ಸಹ ಉಪಸ್ಥಿತರಿರುತ್ತಾರೆ. ಇವರೆಲ್ಲರ ಸಮಕ್ಷಮ ಹಂಚಿನಾಳದ ಶ್ರೀಯುತ ಚರಂತೆಪ್ಪನವರು, ಶ್ರೀ ಯುತ ಸಿದ್ಧಲಿಂಗಯ್ಯನವರು (ಚರಂತೆಪ್ಪನವರ ಸಮಕಾಲೀನರು ಹಾಗೂ ಅವರ ಹತ್ತಿರದ ಸಂಬಂಧಿಕರು) ಮತ್ತು ಹಂಚಿನಾಳ ಶ್ರೀ ಹಿರೇಮಠದ ಆಗಿನ ಪಟ್ಟಾಧ್ಯಕ್ಷ ಶ್ರೀ ಗುರು ಚನ್ನಬಸವ (ಉರ್ಫ ಪಡದಯ್ಯ) ಶಿವಾ

ಚಾರ್ಯ ಸ್ವಾಮಿಗಳು ಪಡದಯ್ಯನವರಿಗೆ ಮಹಾದೇವಯ್ಯ ಎಂಬುದಾಗಿ ಮರುನಾಮಕರಣ ಮಾಡಿ ಹಂಚಿನಾಳ ಶ್ರೀ ಹಿರೇಮಠದ ಉತ್ತರಾಧಿಕಾರಿಯನ್ನಾಗಿ ನೇಮಿಸುತ್ತಾರೆ. ಪಶ್ಚಾತ್ ಪತ್ರದ ಕೊನೆಯಲ್ಲಿರುವ ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರ ಸಹಿಯ ಜೊತೆಗೆ ರಾಮನಗೌಡ ಪಾಟೀಲ, ನೀಲಪ್ಪಗೌಡಾ, ಸಿದ್ಧಲಿಂಗಯ್ಯ ಬಿನ್ನ ಕಾಶಯ್ಯ ಚಿಕ್ಕಮಠ,........ ನಿಂಗಪ್ಪ ಹೊಸಂಗಡಿ, ಸೋಮರಡ್ಡಿ ಗಂಗಲ, ಮುದಕಪ್ಪಾ ಹೂಗಾರ, ಭೀಮರಡ್ಡಿ ಒಂಟಿಗೋಡಿ, ತಿಮ್ಮರಡ್ಡಿ ಗಂಗಲ, ಬಸೆಟ್ಟೆಪ್ಪ ಹೊಸಂಗಡಿ, ಗಂಗಪ್ಪ ಬಳಿಗಾರ, ಗದಿಗೆಪ್ಪ ಬಿನ್ನ ಹುಚ್ಚಪ್ಪ ವಲ್ಲಿ ಸಾಕೀನ ಬ್ಯಾಲ್ಯಾಳ, ಸಿದ್ರಾಮಯ್ಯ ಬಿನ್ನ ವೀರಯ್ಯ ಹಿರೇಮಠ ಸಾಕೀನ ಜಾವೂರ, ಮುಂತಾದವರ ಸಹಿಗಳು ಇರುತ್ತವೆ. ಆ ಪಶ್ಚಾತ್ ಪತ್ರದ ಪೂರ್ಣ ವಿವರಣೆಯು ಈ ಕೆಳಗಿನಂತೆ ಇರುತ್ತದೆ.

|| ಶ್ರೀ ಸಿದ್ಧನಂಜೇಶ್ವರಾಯ ನಮ : ||

ಸಿದ್ಧಲಿಂಗಪ್ಪನವರು
ಚರಂತೆಪ್ಪನವರು

ಶ್ರೀ ಮಹಾಮೇರು ಪರ್ವತಕ್ಕು
ಮಿಗಿಲು, ಕಾಮದೇನು ಕಲ್ಪವೃಕ್ಷ,
ಕಲಲತಿ ಚಿಂತಾಮಣಿ,
ಪರುಷದ ಖಣಿ...........ಪರಹಿತಾ-
ರ್ಥ ಕೊಡುವುದಕ್ಕ ವೆಗ್ಗಳ ನಾಮಾಂ-
ಕಿತವುಳ್ಳವರು, ಕ್ಸಬಾ ಹೂಲಿ,
ಹಂಚಿನಾಳ, ವುಗರಗೋಳ, ಹಿರೇ-
ಕುಮ್ಮಿ ವಗ್ಯೆರೆ ಸ್ಥಳಕ್ಕ ಅಧಿಕಾರಿ-
ಗಳಾದ, ಆಚಾರ-ವಿಚಾರ-ಸದಾಚಾರ
ಮೂರಕ್ಕೆ ಕಾರಣ ಕರ್ತೃಗಳಾದ
ಹಿರೇಮಠದ ಪಟ್ಟದ ದೇವರು-

ಶ್ರೀ ಮನ್ನೃಪ ಶಾಲಿವಾಹನ ಶಕೆ ೧೮೦೬ ತಾರಣನಾಮ ಸಂವತ್ಸರಶ್ಯ ಪುಷ್ಯ ಶುದ್ಧ ೮ ಗುರುವಾರ ದಿವಸ ನಮ್ಮ ವೃದ್ಧಾವಸಾನ ಕಾಲ ಆದ ಕಾರಣ ನಮ್ಮ ಪರಂಪಾರ ಮಠದ ರಿವಾಜ ಪ್ರಕಾರ ನಮ್ಮ ಪಡಹುಟ್ಟಿದ

ಚರಂತೆಪ್ಪ ಬಿನ್ನ ದೊಡ್ಡಸಿದ್ಧಯ್ಯ ಯಿತನ ಪುತ್ರ ಮಹಾದೇವಪ್ಪ ಎಂಬವನ್ನ ನಮ್ಮ ರಿವಾಜ ಪ್ರಕಾರ ತಾಲೂಕ ನವಲಗುಂದ ಗವಿಮಠಾಧಿಕಾರಿಗಳಾದ ಶಿವ ಪೂಜಿ ಖುಡಿಕಟ್ಟಿನ ಚರಮೂರ್ತಿಗಳಾದ ॥— — —॥ ನವರು, ಗಲಗಲಿ ಹಿರೇಮಠಾಧ್ಯಕ್ಷರಾದ ಶ್ರೀ ವೀರ ಭಿಕ್ಷಾವತಿ ॥ — — — ॥ ವಗೈರೆರನ್ನು ಹಾಗೂ ನಮ್ಮ ಸ್ಥಳದ ಶಿಷ್ಯಮಂಡಳಿ ವಗೈರೆ ಗ್ರಾಮಸ್ತರು ಮುಂತಾದವರ ಸಹಿತ ಕೂಡಿಸಿಕೊಂಡು ನಮ್ಮ ಆತ್ಮ ಸಂತೋಷದಿಂದ ವ ಅಕಲ ಹುಷಾರಿ ಯಿಂದ ರಿವಾಜಿನಂತೆ ನಮ್ಮ ಅಧಿಕಾರ ಮುರವು ಮುದ್ರಾ ಮುಂತಾದ್ದು ಯಿತಗೆ ಕೊಟ್ಟು ಮಠದ ಅಧಿಕಾರಿ ಮಾಡಿದೇವಿ. ನಮ್ಮ ಮಠಗಳ ಹಾಗೂ ಶಿಷ್ಯ ಮಕ್ಕಳೂ ಇನಾಮು ಜಮೀನು ವಗೈರೆ ಹಕ್ಕು ಬಾಬ ಯಾವತ್ತಕ್ಕೂ ಬಾಧೆಸ್ತನಾಗಿ ಅನುಭವ ಮಾಡಿಕೊಂಡು ಆಚಾರ ವಿಚಾರದಿಂದ ಸುರಕ್ಷಿತ ಯಿರಬೇಕು ಯೆಂದು ಬರಕೊಟ್ಟ ಪಶ್ಯಾತ್ ಪತ್ರ ಸಹಿ ತಾರೀಖು ೨೫ ದಶಂಬರು ಸನ್ ೧೮೮೪ ಇಸ್ವಿ.

ಹಸ್ತಾಕ್ಷರ
ಚನ್ನಬಸಯ್ಯ ಮರಿದೇವರಯ್ಯ ಹನಸಿ ಹಿರೇಮಠ
ದಸ್ತುರ ಖುದ್ದ

ಹಿರೇಮಠದ ಪಟ್ಟದ ದೇವರ ಸಹಿ,
ಮತ್ತು
ಇತರರ ಸಹಿಗಳು.

(ಈ ಮೇಲೆ ಬರೆದ ಪತ್ರದ ಮೂಲ ಪ್ರತಿಯಲ್ಲಿ ಕನ್ನಡ ಅಂಕಿಗಳನ್ನು ಬಳಸಿರುವರು)

ಕಳೆದ ತಾರೀಖ ೨೫-೧೨-೧೯೮೪ ರಂದು ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವಯ್ಯ) ಶಿವಾಚಾರ್ಯ ಸ್ವಾಮಿಗಳು ಹಂಚಿನಾಳ ಶ್ರೀ ಹಿರೇಮಠದ ಪಟ್ಟದ ಅಧಿಕಾರ ವಹಿಸಿಕೊಂಡು ನೂರು ವರ್ಷಗಳು ತುಂಬಿದವು.

**ಸಂಸ್ಕೃತ ಅಧ್ಯಯನ :—**

ಹತ್ತೊಂಭತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಈಗಿನಂತೆ "ಶಿವಯೋಗ ಮಂದಿರ"ವಾಗಲೀ ಅಥವಾ ಆದಕ್ಕೆ ಸರಿಸಮವಾಗಬಲ್ಲ

ಬೇರಾವುದೇ ಧಾರ್ಮಿಕ ಶಿಕ್ಷಣ ಸಂಸ್ಥೆಯಾಗಲೀ ಇರಲಿಲ್ಲ. ವೀರಮಾಹೇಶ್ವರ ದೀಕ್ಷೆ ಸ್ವೀಕರಿಸಿದ ಶಿವಯೋಗ ಸಾಧಕರು ಸಂಸ್ಕೃತ ಅಧ್ಯಯನ ಮಾಡಲು ಬಯಸಿದರೆ ಕಾಶೀ ಕ್ಷೇತ್ರಕ್ಕೆ ಹೋಗಬೇಕಾಗುತ್ತಿತ್ತು. ಆದರೆ ಅದು ಅತಿ ದೂರದ ಪ್ರವಾಸ. ಈಗಿನಂತೆ ಆ ಕಾಲದಲ್ಲಿ ಸಾರಿಗೆ ಸೌಲಭ್ಯಗಳೂ ಸಹ ಬಹಳಷ್ಟಿರಲಿಲ್ಲ ಮತ್ತು ಅದಕ್ಕಾಗಿ ಹೆಚ್ಚು ಹಣ ಖರ್ಚಾಗುವುದಂತೂ ಸ್ವಾಭಾವಿಕ. ಅಂತಹ ಕಾಲದಲ್ಲಿ ಹುಬ್ಬಳ್ಳಿ ನಗರದ ಹಳೇ ಹುಬ್ಬಳ್ಳಿಯ ಹಿರೇಪೇಟೆಯಲ್ಲಿರುವ ಪಂಚಗೃಹ ಹಿರೇಮಠದಲ್ಲಿ ಕ್ರಿ. ಶ. ೧೮೮೭–೮೮ ರಲ್ಲಿ ಸಂಸ್ಕೃತ ಪಾಠಶಾಲೆಯೊಂದು ಸ್ಥಾಪಿಸಲ್ಪಡುತ್ತದೆ. ಈ ಸಂಗತಿಯನ್ನು ಹೆಚ್ಚು ಸ್ಪಷ್ಟವಾಗಿ ತಿಳಿಸುವ ಆಗಿನ ಕಾಲದ ಹ್ಯಾಂಡಬಿಲ್‌ಗಳು ಹಂಚಿನಾಳ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಕಾಗದಗಳ ಗಂಟಿನಲ್ಲಿ ಇರುತ್ತವೆ. ಈ ಹ್ಯಾಂಡಬಿಲ್‌ಗಳು "ಹುಬ್ಬಳ್ಳಿ ಪ್ರಿಂಟಿಂಗ್ ವರ್ಕ್ಸ" ಇವರಿಂದ ಮುದ್ರಿಸಲ್ಪಟ್ಟಿವೆ. ಅವುಗಳಲ್ಲಿ ಒಂದರ ಪೂರ್ಣ ವಿವರವನ್ನು ಈ ಕೆಳಗೆ ಕೊಡಲಾಗಿದೆ.

ಶ್ರೀ ಗುರು ಮಹಾರಾಜ ಹಳೇಹುಬ್ಬಳ್ಳಿ
ಪಂಚಗೃಹ ಹಿರೇಮಠದ ಚರಮೂರ್ತಿ
ಸಂಗನಬಸವ ದೇವರಿಂದ ಸ್ಥಾಪಿಸ
ಲ್ಪಟ್ಟ ಸಂಸ್ಕೃತ ಪಾಠಶಾಳಾ

ಕೃಪಾಸಾಗರ ರಾ. ರಾ. ಚರಂತೆಯ್ಯಸ್ವಾಮಿ ಹಿರೇಮಠ, ಹಂಚಿನಾಳ ಇವರ ಸನ್ನಿಧಿಗೆ,

ಸದರ ಪಾಠಶಾಲೆಯ ಅಭಿಮಾನಿಗಳಾದ ಪರಪ್ಪಾ ಸಜ್ಜನ ತಾಳಿಕೋಟಿವ ಬಸನಗೌಡಾ ರಾಮನಗೌಡಾ ಪೋಲಿಸ ಪಾಟೀಲ ಹಳ್ಳಿಹಾಳ ನಾವು ಮಾಡುವ ಶ.ಶ. ವಿನಂತಿ ವಿಜ್ಞಾಪನ: ಈ ಸಂಸ್ಕೃತ ಪಾಠಶಾಲೆಯ ಐದನೇ ವರ್ಷದ ವಾರ್ಷಿಕ ಸಮಾರಂಭ ಸನ್ ೧೮೯೩ ಇಸ್ವಿ ತಾ : ೨೫ ಮಾಹೆ ನವಂಬರ ಶನಿವಾರ ದಿವಸ ಈ ಕೆಳಗಿನ ಪಾಠದ ವಿದ್ಯಾರ್ಥಿಗಳ ಪರೀಕ್ಷಾ ಹಗಲು ೨ ಘಂಟೆಕ್ಕೆ ಸುರು ಆಗಿ ಸಂಜೆ ಆರು ಘಂಟೆಕ್ಕೆ ಪೂರಾ ಮಾಡಿ ವಿಳ್ಯಯುನ್ನಿತ್ತು ಸಭಾ ಬಂದು ಮಾಡುವದು. ಎರಡನೇ ದಿವಸ ಅಂದರೆ

ತಾ : ೨೬ನೇ ಮಾಹೇ ಮಜಕೂರ ದಿವಸ ಮಧ್ಯಾನದ ಎರಡು ಘಂಟಿಕ್ಕೆ ಮೇಲ ಪಾಠದ ಯಾವತ್ತೂ ವಿದ್ಯಾರ್ಥಿಗಳ ಪರೀಕ್ಷಾ ತೆಗೆದುಕೊಂಡು ಪಾಸಾದ ಸಣ್ಣ ದೊಡ್ಡ ವಿದ್ಯಾರ್ಥಿಗಳಿಗೆ ಉತ್ತೇಜನಾರ್ಥವಾಗಿ ಇನಾಮು ಗಳನ್ನು ಕೊಟ್ಟು ಸಭೆಗೆ ಬಂದ ಸದ್ಗೃಹಸ್ತರ ಆಭಾರ ಮಾನಿಸಿ ಹಾರ ಸುಗಂಧ ತೈಲಾದಿಗಳಿಂದಲು ಸದರವನ್ನು ಅಲಂಕರಿಸಿ ವಿಳ್ಯಯನ್ನಿತ್ತು ಸಭಾ ವಿಸರ್ಜನವಾಗುವದು. ಕಾರಣ ಸದರ ನಿಯಮಿತ ವೇಳ್ಯಕ್ಕೆ ತಾವು ದಯಮಾಡಿ ಬಂದು ಲೋಕ ಹಿತಾರ್ಥವಾಗಿ ಸದರ ಪಾಠಶಾಳಾ ಸ್ಥಾಪಿಸ ಲ್ಪಟ್ಟ ಸ್ವಾಮಿಗಳವರ ಮನಸು ತೃಪ್ತಿಗೊಳಿಸಿ ಈ ಪಾಠಶಾಲೆಯನ್ನು ಊರ್ಜಿತ ಸ್ಥಿತಿಗೆ ತರುವಂತೆ ಉತ್ತೇಜನಕೊಟ್ಟು ತಮ್ಮ ಪಾಲಿಗೆ ಕೀರ್ತಿ ಯನ್ನು ಪಡಕೊಳ್ಳುವಿರೆಂದು ನಮ್ಮ ವಿನಯಪೂರ್ವಕ ಪ್ರಾರ್ಥನೆ ಆದೆ. ಅಗತ್ಯ ಅಗತ್ಯ ಬರಬೇಕು. ಹೆಚ್ಚಿಗೆ ಬರಿಯೋದು ಏನದೆ. ಇತಿ ಶ. ವಿನಂತಿ ವಿಜ್ಞಾಪನ :

ಸಹಿ : ಶರಪ್ಪಾ ಸಜ್ಜನ ಸಾ : ತಾಳೀಕೋಟಿ
ತಾಲೂಕ : ಮುದ್ದೇಬಿಹಾಳ
ಸಹಿ : ಬಸನಗೌಡಾ ರಾಮನಗೌಡಾ ಪೋಲಿಸ
ಪಾಟೀಲ ಹಳ್ಳಿಹಾಳ, ತಾ : ಹುಬ್ಬಳ್ಳಿ.
– ಹುಬ್ಬಳ್ಳಿ ಪ್ರಿಂಟಿಂಗ ವರ್ಕ್ಸ –

---

(ಈ ಮೇಲೆ ಬರೆದ ಹ್ಯಾಂಡಬಿಲ್‌ನ ಮೂಲ ಪ್ರತಿಯಲ್ಲಿ ಕನ್ನಡ ಅಂಕಿಗಳನ್ನು ಬಳಸಿರುವರು)

ಕ್ರಿ. ಶ. ೧೮೯೩ ಕ್ಕಿಂತ ಸ್ವಲ್ಪಕಾಲ ಮೊದಲು ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಗುರುಗಳು ಲಿಂಗೈಕ್ಯ ರಾಗಿರಬಹುದು. ಶ್ರೀ ಗುರುವನ್ನು ಕಳೆದುಕೊಂಡು ತಬ್ಬಲಿಯಾದ ಇವರು ಹಳೇಹುಬ್ಬಳ್ಳಿಯ ಶ್ರೀ ಪಂಚಗೃಹ ಹಿರೇಮಠದಲ್ಲಿ ಹೊಸದಾಗಿ ಪ್ರಾರಂಭ ವಾದ ಸಂಸ್ಕೃತ ಪಾಠಶಾಲೆಗೆ ಸಂಸ್ಕೃತ ಕಲಿಯುವುದಕ್ಕಾಗಿ ಹೋಗಲು ಇಚ್ಛಿಸಿರಬಹುದು. ಆ ಪಾಠಶಾಲೆಯಲ್ಲಿ ಇವರು ಸಂಸ್ಕೃತ ಅಧ್ಯಯನ

ಮಾಡಲು ಹೋಗಿದ್ದರೆಂಬುದಕ್ಕೆ ನಮಗಿಂದು ಲಭ್ಯವಿರುವ ಈ ಮೇಲೆ ತಿಳಿಸಿದ ಹ್ಯಾಂಡಬಿಲ್ ಅಲ್ಲದೆ ಇನ್ನೂ ಕೆಲವು ಪತ್ರಗಳು ಹಾಗೂ ಈಸ್ಟ ಇಂಡಿಯಾ ಕಂಪನಿಯ ಪೋಸ್ಟ ಕಾರ್ಡಗಳು ಸಾಕ್ಷಿಯಾಗಿವೆ. ಇವರು ಹಳೇಹುಬ್ಬಳ್ಳಿಯ ಸಂಸ್ಕೃತ ಪಾಠಶಾಲೆಯಲ್ಲಿದ್ದಾಗ ಅಲ್ಲಿಂದ ಹಂಚಿನಾಳ ದಲ್ಲಿದ್ದ ತಮ್ಮ ಪೂರ್ವಾಶ್ರಮದ ತಂದೆ ಶ್ರೀಯುತ ಚರಂತಯ್ಯನವರಿಗೆ ಬರೆದಿರುವ ಹಲವು ಪತ್ರಗಳು ಲಭ್ಯವಿರುತ್ತವೆ. ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಶ್ರೀಯುತ ಚರಂತಯ್ಯನವರಿಂದ ಆರ್ಥಿಕ ಸಹಾಯ ಸಹಕಾರಗಳನ್ನು ಪಡೆದು ಆ ಹಳೇಹುಬ್ಬಳ್ಳಿಯ ಸಂಸ್ಕೃತ ಪಾಠಶಾಲೆಗೆ ಸಂಸ್ಕೃತ ಕಲಿಯಲು ಹೋದರೆಂಬ ಸಂಗತಿಯು ಇವುಗಳಿಂದ ವ್ಯಕ್ತವಾಗುತ್ತದೆ.

ಕ್ರಿ. ಶ. ೧೮೯೩ರಲ್ಲಿ ಶಿವಪೂಜಯ್ಯ ಎಂಬ ಹೆಸರಿನ ಹಳೇಹುಬ್ಬಳ್ಳಿ ಸಂಸ್ಕೃತ ಪಾಠಶಾಲೆಯ ಓರ್ವ ವಿದ್ಯಾರ್ಥಿಯು ಹಂಚಿನಾಳದಲ್ಲಿದ್ದ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗೆ ಈಸ್ಟ ಇಂಡಿಯಾ ಕಂಪನಿಯ ಪೋಸ್ಟ ಕಾರ್ಡಿನಲ್ಲಿ ಪತ್ರವೊಂದನ್ನು ಬರೆದಿರುವನು. ಆ ಪತ್ರದ ಪೂರ್ಣ ವಿವರವು ಈ ಕೆಳಗಿನಂತೆ ಇರುತ್ತದೆ.

ಈಸ್ಟ ಇಂಡಿಯಾ ಪೋಸ್ಟ ಕಾರ್ಡು
ಹಂಚಿನಾಳಕ್ಕೆ—
ಈ ಪತ್ರ ಜಿಲ್ಲಾ ಬೆಳಗಾವ
ತಾಲೂಕ ಸವದತ್ತಿ ಪೈಕಿ
ಹಂಚಿನಾಳದಲ್ಲಿರುವ ಹಿರೇಮಠದ
ಪಡದಪ್ಪನವರಿಗೆ–

ಶ್ರೀ — ತಾ : ೧೨

ವೀರಶೈವ ಮಠೋದ್ಧಾರಿಗಳಾದ
ಹಂಚಿನಾಳ ಹಿರೇಮಠದ
ಪಟ್ಟದ್ದೇವರಿಗೆ—

ನಿಂಮ್ಮ ಹುಬ್ಬಳ್ಳಿಯಲ್ಲಿರುವಾ ನಿಂಮ್ಮ ಬಡ ಶಿಷ್ಯನಾದ ಶಿವಪೂಜಯ್ಯನು ಮಾಡುವ ಶಿರಸಾಷ್ಟಾಂಗ ನಮುಸ್ಕಾರವು. ಆದರೆ ಈಗ ಮಿತಿ ಮಾರ್ಗಶಿರ್ಷ ವದ್ಯ (೬) ವರೆಗೆ ಕ್ಷೇಮದಲ್ಲಿ ಇದ್ದೇನೆ. ನೀವು ನಿಂಮ್ಮ ಕ್ಷೇಮವನ್ನು ತಿಳಿಸುತ್ತ ಇರಬೇಕು. ಸಾಂಪ್ರತು ಪತ್ರ ಬರಿಯಲಿಕ್ಕೆ ಕಾರಣ ವೇನಂದ್ರೆ ನಂಮ್ಮ ಪಾಠ ಟೀಕ ಸಹಿತ ಅಮರಕೋಶ, ರಘುವಂಶ ನಡೆದು (೧೦) ದಿವ್ಸವಾಯಿತು. ಗುರುಪಾದಪ್ಪನವರು, ಸೊಲಬಯ್ಯ, ಪ್ರಭಯ್ಯ, ಶಿದ್ರಾಮಯ್ಯ, ಶಿವಬಸಯ್ಯ, ಮಲ್ಲಯ್ಯ ಇಷ್ಟು ಜನರು ಬಂದಿದ್ದಾರೆ. ಈ ಕಾರ್ಡ ಕಂಡಾಕ್ಷಣಕ್ಕೆ ಶೀವ್ರ ಬರಬೇಕು. ಬರೋದು ಸುಸ್ತ ಇದ್ದರೆ ಒಂದು ಕಾರ್ಡ ಹಾಕಬೇಕು. ಶಿದ್ರಾಮಯ್ಯನು ಶಿರಸಾಷ್ಟಾಂಗ ನಮುಸ್ಕಾರವನ್ನು ಹೇಳಿದ್ದಾನೆ.

ಇಂತಿ ನಮುಸ್ಕಾರವು.

---

(ಈ ಪತ್ರದ ಮೂಲ ಪ್ರತಿಯಲ್ಲಿ ಕನ್ನಡ ಅಂಕಿಗಳನ್ನು ಬಳಸಿರುವರು)

ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಹಳೇ ಹುಬ್ಬಳ್ಳಿಯ ಪಾಠಶಾಲೆಯಲ್ಲಿ ಸಂಸ್ಕೃತ ಕಲಿಯುತ್ತಿದ್ದ ಸಮಯದಲ್ಲಿ ಅಲ್ಲಿಯ ಗುರುಗಳು ಮತ್ತು ಇತರ ವಿದ್ಯಾರ್ಥಿಗಳೊಡನೆ ಕೂಡಿಕೊಂಡು ಮುದ್ದೇಬಿಹಾಳ ತಾಲೂಕಿನ ತಾಳಿಕೋಟಗೆ ಹೋಗಿರುತ್ತಾರೆ. ಆ ಸಮಯದಲ್ಲಿ ತಾಳೀಕೋಟೆಯಿಂದ ಹಂಚಿನಾಳಕ್ಕೆ ತಾವು ಬರೆದ ಪತ್ರವೊಂದರಲ್ಲಿ, ಹಳೇಹುಬ್ಬಳ್ಳಿಯ ಪಾಠಶಾಲೆಯಲ್ಲಿ ತಮ್ಮ ಸಂಸ್ಕೃತ ಅಭ್ಯಾಸವು ಚೆನ್ನಾಗಿ ನಡೆದಿದೆ ಎಂಬುದಾಗಿ ತಿಳಿಸಿರುವರು. ಇದೂ ಅಲ್ಲದೇ ಅವರು, ತಾವು ಆ ಪಾಠಶಾಲೆಯಲ್ಲಿ ಮಹಾಕವಿ ಕಾಳಿದಾಸ ವಿರಚಿತ "ರಘುವಂಶ" ಸಂಸ್ಕೃತ ಕಾವ್ಯದ ಆರನೆಯ ಸರ್ಗದ ಅಭ್ಯಾಸವನ್ನು ಇನ್ನು ಕೆಲವೇ ದಿವಸಗಳಲ್ಲಿ ಮುಗಿಸುವುದಾಗಿಯೂ, ನಂತರ "ಕುಮಾರ ಸಂಭವ" ಕಾವ್ಯದ ಅಧ್ಯಯನವನ್ನು ಪ್ರಾರಂಭಿಸುವವರಿದ್ದೇವೆ ಎಂಬುದಾಗಿಯೂ ತಿಳಿಸಿರುವರು.

ಈ ಮೇಲೆ ತಿಳಿಸಿದ ಹ್ಯಾಂಡಬಿಲ್ ಮತ್ತು ಪತ್ರಗಳಲ್ಲಿರುವ ವಿಷಯ ವನ್ನು ಗಮನಿಸಿದಾಗ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾ ಚಾರ್ಯ ಸ್ವಾಮಿಗಳು ಸಂಸ್ಕೃತಾಭ್ಯಾಸಕ್ಕಾಗಿ ಹಳೇಹುಬ್ಬಳ್ಳಿಯ ಸಂಸ್ಕೃತ ಪಾಠಶಾಲೆಗೆ ಹೋಗಿದ್ದರೆಂಬ ಸಂಗತಿಯಷ್ಟೇ ಅಲ್ಲದೆ ಅಲ್ಲಿ ಅವರು ಅಧ್ಯಯನ ಮಾಡಿದ ಕೆಲವು ಗ್ರಂಥಗಳ ಬಗ್ಗೆಯೂ ಸಹ ನಮಗೆ ತಿಳಿದು ಬರುತ್ತದೆ. ಕ್ರಿ. ಶ. ೧೯೩೫ ರಲ್ಲಿಯೂ ಇದೇ ತರಹದ ಹ್ಯಾಂಡಬಿಲ್ಲಗಳು ಹಂಚಿನಾಳಕ್ಕೆ ಬಂದಿರುತ್ತವೆ. ಒಟ್ಟು ಮೂರು ಹ್ಯಾಂಡಬಿಲ್‌ಗಳು (ಸಂಸ್ಕೃತ ಪಾಠ ಶಾಲೆಯಿಂದ ಬಂದಿರುವ ಆಮಂತ್ರಣ ಪತ್ರಿಕೆಗಳು) ಹಂಚಿನಾಳ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಕಾಗದಗಳ ಗಂಟಿನಲ್ಲಿ ಇರುತ್ತವೆ.

ಮಹಾಕವಿ ಕಾಳಿದಾಸನು ರಚಿಸಿದ "ರಘುವಂಶ" ಎಂಬ ಸಂಸ್ಕೃತ ಕಾವ್ಯದಲ್ಲಿ ದಿಲೀಪನಿಂದ ಆದಿಯಾಗಿ ದಶರಥ, ರಾಮ, ಮತ್ತು ಲವಕುಶರ ವರೆಗಿನ ರಘುವಂಶದ ಎಲ್ಲ ರಾಜರುಗಳ ಇತಿಹಾಸವು ಬಣ್ಣಿಸಲ್ಪಟ್ಟಿದೆ. ಇನ್ನು "ಕುಮಾರ ಸಂಭವ" ಕಾವ್ಯವೂ ಸಹ ಮಹಾಕವಿ ಕಾಳಿದಾಸನಿಂದ ರಚಿಸಲ್ಪಟ್ಟ ಸಂಸ್ಕೃತ ಕಾವ್ಯವಿರುತ್ತದೆ. ಇದರಲ್ಲಿ ಪಾರ್ವತಿಯು ಶಿವನಿ ಗಾಗಿ ಮಾಡಿದ ತಪಸ್ಸು ಮತ್ತು ಶಿವನು ಅವಳನ್ನು ಪರೀಕ್ಷಿಸಿದ ರೀತಿಯನ್ನು ಕುರಿತು ವರ್ಣಿಸಲಾಗಿದೆ.

ಹಳೇಹುಬ್ಬಳ್ಳಿಯ ಶ್ರೀ ಪಂಚಗೃಹ ಹಿರೇಮಠದ ಸಂಸ್ಕೃತ ಪಾಠ ಶಾಲೆಗೆ ಸಂಬಂಧಿಸಿದ ಈ ಎಲ್ಲ ಮಾಹಿತಿಯು, ಹಂಚಿನಾಳ ಶ್ರೀ ಹಿರೇಮ ಠಕ್ಕೆ ಸಂಬಂಧಿಸಿದ ಕಾಗದಗಳ ಗಂಟಿನಲ್ಲಿ ದೊರೆತ ನಂತರ, ಹಳೇಹುಬ್ಬಳ್ಳಿಗೆ ಹೋಗಿ ವಿಚಾರಿಸಲಾಗಿ ಅಲ್ಲಿ "ಶ್ರೀ ಪಂಚಗೃಹ ಹಿರೇಮಠ" ಎಂಬ ಮಠವೊಂದು ಇದ್ದಿರುವುದು ಕಂಡು ಬಂದಿತು. ಹಳೇಹುಬ್ಬಳ್ಳಿಯ ಹಿರೇ ಪೇಟೆಯಲ್ಲಿ ಇರುವ ಈ ಪಂಚಗೃಹ ಹಿರೇಮಠದಲ್ಲಿ ಹಿಂದಿನ ಕಾಲದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದ ಲಿಂಗೈಕ್ಯ ಶ್ರೀ ಷ. ಬ್ರ. ಸಂಗನಬಸವ ಶಿವಾಚಾರ್ಯ ಸ್ವಾಮಿಗಳ ಮತ್ತು ಅವರ ತರುವಾಯ ಆ ಮಠದ ಅಧಿಕಾರ ವಹಿಸಿಕೊಂಡ ಲಿಂಗೈಕ್ಯ ಶ್ರೀ ಷ.ಬ್ರ. ವೀರಭದ್ರ ಶಿವಾಚಾರ್ಯ ಸ್ವಾಮಿಗಳ ಗದ್ದುಗೆಗಳು ಇರುವುದು ಕಂಡು ಬಂದಿತು. ಆ ಪಂಚಗೃಹ ಹಿರೇಮಠದ

ಈಗಿನ ಪಟ್ಟಾಧ್ಯಕ್ಷರಾಗಿ ಶ್ರೀ ಷ.ಬ್ರ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಕಾರ್ಯ ನಿರ್ವಹಿಸುತ್ತಿರುವರೆಂಬ ಸಂಗತಿಯು ತಿಳಿಯಿತು. ಆ ಪಂಚಗೃಹ ಹಿರೇಮಠಕ್ಕೆ ಹುಬ್ಬಳ್ಳಿ ತಾಲೂಕಿನ ಹಳ್ಳಿಯಾಳ ಗ್ರಾಮದಲ್ಲಿ ಒಂದು ಶಾಖಾ ಮಠವು ಇರುತ್ತದೆ. ಶ್ರೀ ಷ.ಬ್ರ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಬಾಳೆಹೊನ್ನೂರಿನ ಶ್ರೀ ಮದ್ ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶ್ರೀ ೧೧೦ಲ ಜಗದ್ಗುರು ಪ್ರಸನ್ ರೇಣುಕ ವೀರರುದ್ರಮುನಿ ಶಿವಾಚಾರ್ಯ ಮಹಾಸ್ವಾಮಿಗಳ ಅಪ್ಪಣೆಯ ಮೇರೆಗೆ, ಬೆಂಗಳೂರ ಜಿಲ್ಲೆಯ ಶಿವಗಂಗಾ ಕ್ಷೇತ್ರದಲ್ಲಿರುವ ಶ್ರೀ ಮೇಲಣಗವಿ ವೀರಸಿಂಹಾಸನ ಮಠದ ಅಧಿಕಾರವನ್ನು ಸಹ ವಹಿಸಿಕೊಂಡಿರುವರು. ಹಳೇಹುಬ್ಬಳ್ಳಿಯ ಶ್ರೀ ಪಂಚಗೃಹ ಹಿರೇಮಠವು, ಪಂಚಪೀಠಗಳಲ್ಲೊಂದಾದ ಉಜ್ಜಯಿನಿ ಪೀಠದ ಸದ್ಧರ್ಮ ಸಿಂಹಾಸನದ ಪರಂಪರೆಗೆ ಸಂಬಂಧಿಸಿದ ಮಠವಿರುತ್ತದೆ. ಹಳೇ ಹುಬ್ಬಳ್ಳಿಯ ಶ್ರೀ ಪಂಚಗೃಹ ಹಿರೇಮಠದಲ್ಲಿ ನೂರಾರು ವರ್ಷಗಳ ಹಿಂದೆ ಒಂದು ಸಂಸ್ಕೃತ ಪಾಠಶಾಲೆ ಇತ್ತು, ಆದರೆ ಅದು ಸ್ಥಗಿತಗೊಂಡು ಬಹಳ ವರ್ಷಗಳು ಗತಿಸಿವೆ ಎಂಬುದಾಗಿ ಆ ಮಠದ ಶ್ರೀ ಷ.ಬ್ರ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಹೇಳುತ್ತಾರೆ. ಹಂಚಿನಾಳ ಶ್ರೀ ಹಿರೇಮಠದ ಅವಶೇಷಗಳನ್ನು ತೋರಿಸಿ ಶ್ರೀ ಸಿದ್ಧಲಿಂಗೇಶ್ವರನ ದರ್ಶನ ಮಾಡಿಸಬೇಕೆಂಬ ಉದ್ದೇಶದಿಂದ ಶ್ರೀ ಷ.ಬ್ರ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳನ್ನು ತಾರೀಖು ೫-೮-೧೯೯೦ ರಂದು ಹಂಚಿನಾಳಕ್ಕೆ ಆಮಂತ್ರಿಸಲಾಗಿತ್ತು. ಇದರ ಸವಿ ನೆನಪಿಗಾಗಿ ಈ ಪುಸ್ತಕಕ್ಕೆ ಅವರಿಂದಲೇ ಮುನ್ನುಡಿಯನ್ನು ಬರೆಸಲಾಗಿದೆ.

ಕ್ರಿ ಶ. ೧೯೯೭ ರಲ್ಲಿ ಹಾರೋಬೆಳವಡಿ ಗ್ರಾಮದ ವೀರಭದ್ರಯ್ಯ ಎಂಬವರಿಂದ ಹಂಚಿನಾಳ ಶ್ರೀ ಹಿರೇಮಠದ ಪಟ್ಟದ್ದೇವರಿಗೆ ಈಸ್ಟ ಇಂಡಿಯಾ ಪೋಷ್ಟ ಕಾರ್ಡೊಂದು ಬಂದಿರುತ್ತದೆ. ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಹಳೇಹುಬ್ಬಳ್ಳಿಗೆ ಹೋಗುವರೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ಹಾರೋಬೆಳವಡಿಯ ಶ್ರೀ ವೀರಭದ್ರಯ್ಯ ಎಂಬವರು ಈ ಪತ್ರವನ್ನು ಹಂಚಿನಾಳಕ್ಕೆ ಬರೆದಿರುವರು.

ಈ ಎಲ್ಲ ಮಾಹಿತಿಗಳ ಆಧಾರದ ಮೇಲಿಂದ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಸಂಸ್ಕೃತ ಅಧ್ಯಯನಕ್ಕಾಗಿ ಹಳೇಹುಬ್ಬಳ್ಳಿಯ ಪಾಠಶಾಲೆಗೆ ಸುಮಾರು ಕ್ರಿ. ಶ. ೧೮೯೩ ರಿಂದ ಕ್ರಿ. ಶ. ೧೮೯೫ರ ಮಧ್ಯದ ಅವಧಿಯಲ್ಲಿ ಹೋಗಿದ್ದರೆಂಬುದು ತಿಳಿದು ಬರುತ್ತದೆ.

## ಸಪ್ತಕದಲ್ಲಿ ಭಾಗವಹಿಸಲು ತಾಳೀಕೋಟೆಗೆ ಪ್ರಯಾಣ

ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ತಾವು ಹಳೇ ಹುಬ್ಬಳ್ಳಿಯಿಂದ ಮುದ್ದೇಬಿಹಾಳ ತಾಲೂಕಿನಲ್ಲಿಯ ತಾಳೀಕೋಟೆಗೆ ಹೋಗಿದ್ದ ವಿಷಯವನ್ನು ತಾಳೀಕೋಟೆಯಿಂದ ಹಂಚಿನಾಳಕ್ಕೆ ಬರೆದ ತಮ್ಮ ಒಂದು ಪತ್ರದಲ್ಲಿ ತಿಳಿಸಿರುವರು. ಹಳೇಹುಬ್ಬಳ್ಳಿಯ ಸಂಸ್ಕೃತ ಪಾಠಶಾಲೆಯ ಗುರುಗಳ ಜೊತೆಗೆ ಎಲ್ಲ ರೀತಿಯಿಂದಲೂ ಸುರಕ್ಷಿತವಾಗಿ ತಾಳೀಕೋಟೆಗೆ ಬಂದು ತಲುಪಿರುವುದಾಗಿಯೂ, ತಾವು ಸಪ್ತಕದ ಉದ್ದಿಶ್ಯವಾಗಿ ಎಲ್ಲ ಮಠಗಳು ಸಹಿತವಾಗಿ ತಾಳೀಕೋಟೆಗೆ ಬಂದಿದ್ದೇವೆ ಎಂಬುದಾಗಿಯೂ, ಸಪ್ತಕವು ಮುಗಿದು ತಾಳೀಕೋಟೆಯನ್ನು ಬಿಡಬೇಕಾದರೆ ಎಂಟು ಹತ್ತು ದಿವಸಗಳು ಆಗಬಹುದಾಗಿಯೂ, ಅಲ್ಲಿ ತಾವುಗಳು ಸುರಕ್ಷಿತವಾಗಿ ಇರುವುದಾಗಿಯೂ ಮತ್ತು ತಮ್ಮ ವಿಷಯದಲ್ಲಿ ಬಿಲ್ಕುಲ ಕಾಳಜಿ ಮಾಡಬಾರದು ಎಂಬುದಾಗಿಯೂ ಶ್ರೀಯುತ ಚರಂತಯ್ಯನವರಿಗೆ ಬರೆದ ಆ ಪತ್ರದಲ್ಲಿ ತಿಳಿಸಿರುವರು.

ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ತಾಳೀಕೋಟೆಯಿಂದ ಬರೆದ ತಮ್ಮ ಆ ಪತ್ರದ ಕೊನೆಯಲ್ಲಿ ಹಂಚಿನಾಳದಲ್ಲಿರುವ ರಾ|| ರಾ|| ಬಸಪ್ಪ, ಭೀಮಪ್ಪಾ, ಅಡಿವೆಪ್ಪಾ, ಶಿವಲಿಂಗಪ್ಪಾ, ಹನುಮಂತಪ್ಪಾ ಮತ್ತು ಗೋವಿಂದಪ್ಪಾ ಇವರುಗಳಿಗೆ ತಮ್ಮ ಆಶೀರ್ವಾದ ಹೇಳಬೇಕು ಎಂಬುದಾಗಿ ಶ್ರೀಯುತ ಚರಂತಯ್ಯನವರಿಗೆ ತಿಳಿಸಿರುವರು. ಆ ಪತ್ರಕ್ಕೆ ಉತ್ತರ ಬರೆಯುವುದಾದರೆ ಮುದ್ದೇಬಿಹಾಳ ತಾಲೂಕ ಪೈಕಿ ತಾಳೀಕೋಟೆಯಲ್ಲಿರುವ ಶ್ರೀಯುತ ಪರಪ್ಪಜ್ಜನವರ ವಿಳಾಸಕ್ಕೆ ತಲುಪುವಂತೆ ಬರೆಯಬೇಕೆಂಬುದಾಗಿ ಶ್ರೀಯುತ ಚರಂತಯ್ಯನವರಿಗೆ ತಿಳಿಸಿರುವರು.

## ಶ್ರೀ ಕೂಡಲ ಸಂಗಮೇಶ್ವರನ ದರ್ಶನ

ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನವು ಬಹು ಪ್ರಾಚೀನ ಇತಿಹಾಸವನ್ನು ಹೊಂದಿರುವುದು. ಬಾಲಕ ಬಸವಣ್ಣನು ಶ್ರೀ ಗುರು ಜಾತವೇದ ಮುನಿ ಶಿವಾಚಾರ್ಯ ಸ್ವಾಮಿಗಳಿಂದ ಶಿವಧರ್ಮದೀಕ್ಷೆಯನ್ನು ಪಡೆದು ವಿದ್ಯಾಭ್ಯಾಸ ಮಾಡಿದ್ದು ಈ ಕ್ಷೇತ್ರದಲ್ಲಿಯೇ. ಸಮಾಜದ ಅಂಕುಡೊಂಕುಗಳನ್ನು ತಿದ್ದಿದ ಬಸವಣ್ಣನವರು ಮತ್ತು ಅವರ ಸಮಕಾಲೀನ ಶರಣರು ಬರೆದ ವಚನಗಳು ಕನ್ನಡ ಸಾಹಿತ್ಯಕ್ಕೆ ಕಳಸಪ್ರಾಯವಾಗಿವೆ. ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ ಶಿವಶರಣರಿಂದಾಗಿ ಶ್ರೀ ಕೂಡಲ ಸಂಗಮೇಶ್ವರನ ಕ್ಷೇತ್ರವು ಇತಿಹಾಸ ಪ್ರಸಿದ್ಧಿಯನ್ನು ಪಡೆದಿದೆ.

ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ತಾವು ಹಳೇಹುಬ್ಬಳ್ಳಿಯ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ಅಧ್ಯಯನ ಮಾಡುತ್ತಿದ್ದ ಸಮಯದಲ್ಲಿ ಪಾಠಶಾಲೆಯಲ್ಲಿನ ಗುರುಗಳು ಮತ್ತು ವಿದ್ಯಾರ್ಥಿಗಳ ಜೊತೆಗೂಡಿ ಕ್ರಿ. ಶ. ೧೮೫೩-೫೪ನೇ ಇಸ್ವಿಯಲ್ಲಿ ಶ್ರೀ ಕೂಡಲ ಸಂಗಮೇಶ್ವರನ ದರ್ಶನಕ್ಕಾಗಿ ಸಂಗಮಕ್ಕೆ ಹೋಗುತ್ತಾರೆ. ಅವರು ಕೂಡಲ ಸಂಗಮಕ್ಕೆ ಹೋಗುವ ಪೂರ್ವದಲ್ಲಿ ಹಳೇಹುಬ್ಬಳ್ಳಿಯಿಂದ ಹಂಚಿನಾಳದಲ್ಲಿರುವ ಶ್ರೀಯುತ ಚರಂತೆಪ್ಪನವರಿಗೆ ಬರೆದ ಒಂದು ಪತ್ರವು ಈ ಸಂಗತಿಯನ್ನು ಸ್ಪಷ್ಟವಾಗಿ ತಿಳಿಸುತ್ತದೆ.

---

|| ಶ್ರೀ ವಿರೂಪಾಕ್ಷಾಯ ನಮಃ ||

ತಿ || ರಾ॥ ರಾಜೇಶ್ರೀ ಮಹಿಕ್ಕಾಂ
ಹಂಚಿನಾಳದಲ್ಲಿರುವ ಹಿರೇಮಠದ
ಚರಂತೆಪ್ಪಾ ಅಪ್ಪಾ ಇವರ
ಚರಣಗಳಿಗೆ-

ನಿಮ್ಮ ಹಳೇಹುಬ್ಬಳ್ಳಿ ಹಿರೇಮಠದಲ್ಲಿರುವ ಚಿರಂಜೀವಿಯಾದ ಪಡದಯ್ಯನು ಮಾಡುವ ನಮಸ್ಕಾರಗಳು. ಆದರೆ ವಿಜಯನಾಮ ಸಂವತ್ಸರದ ಫಾಲ್ಗುಣ ಶುದ್ಧ ೧೦ರ ವರಿಗೆ ಕ್ಷೇಮ. ನಿಮ್ಮ ಕ್ಷೇಮವನ್ನು ಸದಾ ಬರಿ

ಸುತ್ತಾ ಬರಬೇಕು. ಸಾಂಪ್ರತು ಪತ್ರಾಭಿಪ್ರಾಯಃವೇನೆಂದರೆ ಈಗ ದೀಡ ರೂಪಾಯಿ ಕೊಟ್ಟು ಎರಡು ಧೋತ್ರ, ಒಂದು ಅಂಗಿ, ಸಾಲ ಮಾಡಿ ತೆಗೆದುಕೊಂಡು ಇದ್ದೇನೆ. ಆದಕಾರಣ ನಾಲ್ಕು ರೂಪಾಯಿಗಳನ್ನು ಈ ಪತ್ರ ಕಂಡಾಕ್ಷಣವೆ ಒಬ್ಬ ಮನುಷ್ಯನನ್ನು ಮಾಡಿ ಕಳಿಸಬೇಕು. ಮತ್ತು ಯುಗಾದಿ ಆದ ಮರು ದಿವ್ಸ ಸಂಗಮಕ್ಕೆ ಯಲ್ಲಾ ಮರಿಗಳನ್ನು ಕರೆದು ಕೊಂಡು ಹೋಗುತ್ತಾರೆ. ಅಷ್ಟರೊಳಗೆ ನೀವು ಬರೋಹಾಗಿದ್ದರೆ ಹೊರಟು ಬರಬೇಕು. ವಿಶೇಷ ಬಲ್ಲಂತೆ ಪ್ರಾಜ್ಞರಿಗೆ ಅತಿಶ ಬರಿಯಲಿಕ್ಕೆ ಶಕ್ತನಲ್ಲಾ.

ಇತಿ ನಮಸ್ಕಾರಗಳು

---

(ಈ ಪತ್ರದ ಮೂಲ ಪ್ರತಿಯಲ್ಲಿ ಕನ್ನಡ ಅಂಕಿಗಳನ್ನು ಬಳಸಿರುವರು)

## ಅಳಿದುಳಿದ ಸಾಹಿತ್ಯ ಸಂಗ್ರಹ

ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಹಳೇಹುಬ್ಬಳ್ಳಿಯ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ಗ್ರಂಥಗಳ ಅಧ್ಯಯನ ಮಾಡಿ ಬಂದುದನ್ನು ಕುರಿತು ನಾವು ಈ ವರೆಗೆ ತಿಳಿದುಕೊಂಡೆವು. ಅವರ ಅಧ್ಯಯನವು ಕೇವಲ ಆ ಗ್ರಂಥಗಳ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅವರ ಅಳಿದುಳಿದ ಸಾಹಿತ್ಯ ಸಂಗ್ರಹವನ್ನು ಗಮನಿಸಿದರೆ ಅವರ ಜ್ಞಾನ ಸಂಗ್ರಹವು ಎಷ್ಟೊಂದು ವ್ಯಾಪಕವಾಗಿ ತ್ತೆಂಬುದು ನಮಗೆ ತಿಳಿಯುತ್ತದೆ. ಆ ಸಾಹಿತ್ಯದಲ್ಲಿ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗಿಂತ ಮೊದಲಿನ ಹಂಚಿನಾಳ ಶ್ರೀ ಹಿರೇಮಠದ ಶಿವಾಚಾರ್ಯರುಗಳು ಸಂಗ್ರಹಿಸಿ ಇಟ್ಟಿರುವ ಸಾಹಿತ್ಯವೂ ಸೇರಿರುತ್ತದೆ. ಆ ಸಂಗ್ರಹದಲ್ಲಿನ ಸ್ವಲ್ಪ ಭಾಗವು ಮಾತ್ರ ನಮಗಿಂದು ಲಭ್ಯವಿರುತ್ತದೆ. ಈಗ ಲಭ್ಯವಿ ರುವ ಒಂದೇ ಒಂದು ಚಿಕ್ಕಗಂಟಿನಲ್ಲಿ ಕೆಲವು ಪುಸ್ತಕಗಳು ಮತ್ತು ಕೆಲವು ಕೈ ಬರಹದ ಸಂಗ್ರಹಗಳು ಇರುತ್ತವೆ. ಆ ಸಂಗ್ರಹದಲ್ಲಿ ದಿನ ನಿತ್ಯದ ಇಷ್ಟ ಲಿಂಗ ಪೂಜೆಗೆ ಮತ್ತು ರುದ್ರಾಭಿಷೇಕಕ್ಕೆ ಅಗತ್ಯವಿರುವ ಧಾರ್ಮಿಕ ಸಾಹಿತ್ಯ, ವ್ಯಾಕರಣ ಮತ್ತು ಜ್ಯೋತಿಶಾಸ್ತ್ರಕ್ಕೆ ಸಂಬಂಧಿಸಿದ ಸಾಹಿತ್ಯ,

"ಪಂಚಾಚಾರ್ಯರ ವಂಶಾವಳಿ" ಎಂಬ ಹೆಸರಿನ ಚಿಕ್ಕ ಪುಸ್ತಕ, "ಶಿವ ಯೋಗ ಮಂದಿರ ಸಮಾಚಾರವೇನು ?" ಎಂಬ ಹೆಸರಿನ ಚಿಕ್ಕ ಪುಸ್ತಕ, ಶ್ರೀಮನ್ ನಿಜಗುಣ ಶಿವಯೋಗಿ ವಿರಚಿತ ಗ್ರಂಥಗಳು, ಶ್ರೀ ಸರ್ಪಭೂಷಣ ಶಿವಯೋಗಿ ವಿರಚಿತ ಗ್ರಂಥಗಳು, ಕ್ರಿ. ಶ. ೧೮೯೬ನೇ ಇಸ್ವಿಯ "ಸುಧಾರಕ" ಎಂಬ ಹೆಸರಿನ ಒಂದು ಸಮಾಚಾರ ಪತ್ರಿಕೆ, ಹಂಚಿನಾಳ ಗ್ರಾಮದಲ್ಲಿ ಕ್ರಿ. ಶ. ೧೮೫೭ ರಲ್ಲಿ ಜರುಗಿದ ಲೋಕೋಪಯೋಗಿ ಕಾರ್ಯವೊಂದಕ್ಕೆ ಸಂಬಂಧಿಸಿದ ಆಗಿನ ಸರಕಾರದ ವರದಿ, ಮೈಸೂರ ಸೀಮೆಯ ಚೀಫ್ ಕಮಿಶನರ ಕೋರ್ಟಿನಲ್ಲಿ ನಡೆದ ಒಂದು ಕೇಸಿನ ತೀರ್ಪಿನ ನಕಲು, — — — — ಮುಂತಾದ ವೈವಿಧ್ಯಮಯವಾದ ವಿಷಯಗಳು ಇರುವುದನ್ನು ನಾವು ಕಾಣುತ್ತೇವೆ. ಲಭ್ಯವಿರುವ ಈ ಎಲ್ಲ ಸಾಹಿತ್ಯ ಸಂಗ್ರಹವನ್ನು ಪ್ರಕಟಿತ (ಪ್ರಿಂಟೆಡ್) ಮತ್ತು ಅಪ್ರಕಟಿತ (ಕೈಬರಹದಲ್ಲಿದ್ದ) ಸಾಹಿತ್ಯ ಎಂಬುದಾಗಿ ವಿಂಗಡಿಸಿ ಈ ಪುಸ್ತಕದ ಕೊನೆಯಲ್ಲಿ ಇರುವ ಅನುಬಂಧದಲ್ಲಿ ಪಟ್ಟಿ ಮಾಡಿ ಬರೆಯಲಾಗಿದೆ.

ಈ ಪುಸ್ತಕದ ಕೊನೆಯಲ್ಲಿರುವ ಅನುಬಂಧದಲ್ಲಿ ಪಟ್ಟಿಮಾಡಿ ಕೊಟ್ಟಿರುವ ಎಲ್ಲ ವಿಷಯಗಳನ್ನು ಅವಲೋಕಿಸಿದರೆ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಯಾವ ಯಾವ ವಿಷಯಗಳನ್ನು ಅಭ್ಯಾಸ ಮಾಡಿದ್ದರು ಎಂಬುದು ನಮಗೆ ತಿಳಿಯುತ್ತದೆ. ಅವರು ಮಾತೃಭಾಷೆ ಕನ್ನಡದ ಜೊತೆಗೆ ಸಂಸ್ಕೃತ ಮತ್ತು ಮರಾಠಿ ಭಾಷೆಗಳನ್ನೂ ಸಹ ಬಲ್ಲವರಾಗಿದ್ದರು ಎಂಬುದು ತಿಳಿಯುತ್ತದೆ.

## ಶ್ರೀಶೈಲ ಜಗದ್ಗುರುಗಳ ಆಗಮನ

ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಹಂಚಿನಾಳ ಹಿರೇಮಠದ ಪಟ್ಟಾಧ್ಯಕ್ಷರಾಗಿದ್ದ ಅವಧಿಯಲ್ಲಿ ಪಂಚ ಪೀಠಗಳಲ್ಲೊಂದಾದ ಶ್ರೀಶೈಲ ಪೀಠದ ಆಗಿನ ಜಗದ್ಗುರುಗಳ ಮಹಾಸವಾರಿಯು ದೇಶ ಸಂಚಾರಾರ್ಥವಾಗಿ ಹೊರಟು ಹಂಚಿನಾಳ ಗ್ರಾಮಕ್ಕೂ ಸಹ ಆಗಮಿಸಿತ್ತು ಎಂಬುದು ತಿಳಿದು ಬರುತ್ತದೆ. ಈ ಆಗಮನದ ಮುನ್ಸೂಚನೆಯಾಗಿ ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಿಗೆ ಬಂದಿರುವ ದೊಡ್ಡ

ಗೊತ್ರದ, ಪ್ರಿಂಟ ಮಾಡಲ್ಪಟ್ಟ, ಸೂಚನಾ ಪತ್ರವೊಂದು ಲಭ್ಯವಿರುತ್ತದೆ. ಈ ಸೂಚನಾ ಪತ್ರದಲ್ಲಿ ತಾರೀಖು ೯ ಸಪ್ಟಂಬರ ತಿಂಗಳು ೧೮೮೫ನೇ ಇಸ್ವಿ ಎಂದು ಬರೆಯಲಾಗಿದೆ. ಇದು ಬಹುಶಃ ಆ ಮಹಾಸವಾರಿಯು ಹಂಚಿ ನಾಳ ಗ್ರಾಮಕ್ಕೆ ಆಗಮಿಸುವ ದಿನಾಂಕ ಇದ್ದಿರಬಹುದು. ಈ ಸೂಚನಾ ಪತ್ರವು ಸಂಪಗಾವಿ ತಾಲೂಕಿನ ಬೈಲಹೊಂಗಲದಿಂದ ಬಂದಿರುತ್ತದೆ. (ಮೊದಲಿನ ಕಾಲದಲ್ಲಿ ಬೈಲಹೊಂಗಲದ ಬದಲಾಗಿ ಸಂಪಗಾವಿಯೇ ತಾಲೂಕಾ ಸ್ಥಳವಾಗಿತ್ತೆಂಬುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.)

## ಉಜ್ಜಯಿನಿ ಜಗದ್ಗುರುಗಳ ಆಗಮನ

ಹಂಚಿನಾಳ ಹಿರೇಮಠಕ್ಕೆ ಸಂಬಂಧಿಸಿದ ಕಾಗದಗಳ ಗಂಟಿನಲ್ಲಿ ಶ್ರೀ ಉಜ್ಜಯಿನಿ ಪೀಠದ ಕಛೇರಿಯ ಮುದ್ರೆಯನ್ನು ಒಳಗೊಂಡಿರುವ ಮತ್ತು ಉಜ್ಜಯಿನಿ ಪೀಠದ ಮಹಾಸ್ವಾಮಿಗಳವರ ಹಸ್ತಾಕ್ಷರದಲ್ಲಿರುವ ಕಾಗದ ವೊಂದು ಇರುತ್ತದೆ. ಈ ಕಾಗದವು, ಶ್ರೀ ಉಜ್ಜಯಿನಿ ಜಗದ್ಗುರುಗಳವರು ಹಂಚಿನಾಳಕ್ಕೆ ಆಗಮಿಸಿದಾಗ ಅವರಿಂದ ಹಂಚಿನಾಳದಲ್ಲಿಯೇ ಬರೆಯಲ್ಪ ಟ್ಟಿದೆ. ಇದನ್ನು ಅವರು ಹನಸಿ ಮಠದ ಶ್ರೀಯುತ ಅಯ್ಯಪ್ಪ ಎಂಬವರಿಗೆ ಬರೆದಿರುವರು. ತಾವು ಹಂಚಿನಾಳಕ್ಕೆ ಆಗಮಿಸಿರುವುದಾಗಿಯೂ, ಹಂಚಿ ನಾಳದ ಶ್ರೀಯುತ ಚರಂತಯ್ಯನವರ ಆದರಾತಿಥ್ಯದಲ್ಲಿ ಇರುವುದಾಗಿಯೂ ಆ ಪತ್ರದ ಮುಖಾಂತರ ಅವರು ಹನಸಿ ಮಠದ ಅಯ್ಯಪ್ಪ ಎಂಬವರಿಗೆ ತಿಳಿಸಿರುವರು. ತಾವು ಹಂಚಿನಾಳಕ್ಕೆ ದಯಮಾಡಿಸಿದುದರ ಪ್ರಯುಕ್ತ ಹಂಚಿನಾಳದ ಶ್ರೀಯುತ ಚರಂತಯ್ಯನವರು ಮಹಾಪ್ರಸ್ತವನ್ನು ನಡೆಸು ತ್ತಿರುವುದಾಗಿಯೂ ತಿಳಿಸಿ ಹನಸಿ ಮಠದ ಅಯ್ಯಪ್ಪ ಎಂಬವರನ್ನು ಹಂಚಿ ನಾಳಕ್ಕೆ ಬರಬೇಕೆಂದು ಅಪ್ಪಣೆ ಕೊಡಿಸಿ ಈ ಪತ್ರ ಬರೆದಿರುವರು. ಈ ಪತ್ರದ ಕೊನೆಯಲ್ಲಿ ಮಹಾಸ್ವಾಮಿಗಳ ಸಹಿ ಇರುವುದು. ಈ ಪತ್ರವು ಕೆಂಪು ಮಸಿಯಿಂದ ಬರೆಯಲ್ಪಟ್ಟಿದೆ ಮತ್ತು ಈ ಕಾಗದದ ಮೇಲ್ಭಾಗದಲ್ಲಿ ಇರುವ ಉಜ್ಜಯಿನಿ ಪೀಠದ ಕಛೇರಿಯ ಮುದ್ರೆಯೂ ಸಹ ಕೆಂಪು ಮಸಿ ಯಲ್ಲಿಯೇ ಇರುವುದು. ಆ ಮುದ್ರೆಯಲ್ಲಿ ಸಂಸ್ಕೃತ ಭಾಷೆಯ ಅಕ್ಷರಗಳು

ಇರುತ್ತವೆ, ಮತ್ತು ಅದರ ಮಧ್ಯಭಾಗದಲ್ಲಿ ಒಂದು ವರ್ತುಳ ಮತ್ತು ಒಂದು ಅರ್ಧ ಚಂದ್ರಾಕೃತಿಯು ಇರುತ್ತವೆ.

## ರಾಷ್ಟ್ರೀಯ ಸಮಾಚಾರ ಸಂಗ್ರಹ

ಕ್ರಿ. ಶ. ೧೬೦೦ನೇ ಇಸ್ವಿಯಲ್ಲಿ ಈಸ್ಟ ಇಂಡಿಯಾ ಕಂಪನಿಯನ್ನು ರಚಿಸಿಕೊಂಡು ವ್ಯಾಪಾರಕ್ಕೆಂದು ಭಾರತ ದೇಶಕ್ಕೆ ಆಗಮಿಸಿದ ಬ್ರಿಟಿಷರು ಇಡೀ ಭಾರತ ದೇಶವನ್ನು ತಮ್ಮ ಕಪಿ ಮುಷ್ಟಿಯಲ್ಲಿ ಹಿಡಿದುಕೊಂಡಿದ್ದರು. ಭಾರತೀಯರ ಹಿತರಕ್ಷಣೆ ಮಾಡಬೇಕೆಂಬುದು ವಸಹಾತು ಶಾಹಿಗಳಾಗಿದ್ದ ಬ್ರಿಟಿಷರ ಮುಖ್ಯ ಗುರಿಯಾಗಿರಲಿಲ್ಲ. ಭಾರತೀಯರೆಲ್ಲರ ಹಿತರಕ್ಷಣೆಗಾಗಿ ಭಾರತ ದೇಶದ ದೊಡ್ಡ ದೊಡ್ಡ ನಗರಗಳಲ್ಲಿ ಸಾಮಾಜಿಕ ಸಂಘ, ಸಂಸ್ಥೆಗಳು ಜನ್ಮ ತಾಳಿದವು. ಪೂನಾದಲ್ಲಿ ಡೆಕ್ಕನ್ ಸಭಾ ಎಂಬ ಸಾಮಾಜಿಕ ಸಂಸ್ಥೆಯು ಇತ್ತು. ಕ್ರಿ.ಶ. ೧೮೮೫ ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೇಸು ಜನ್ಮ ತಾಳಿತು.

ಸಮಾಜ ಸುಧಾರಣೆಗಾಗಿ ಮತ್ತು ಭಾರತೀಯರಲ್ಲಿ ಜಾಗೃತಿಯನ್ನು ಮೂಡಿಸಿ, ರಾಷ್ಟ್ರೀಯತೆಯ ಬೀಜವನ್ನು ಬಿತ್ತುವ ಸಲುವಾಗಿ ಈ ಎಲ್ಲ ಸಂಘ ಸಂಸ್ಥೆಗಳು ನಡೆಸುವ ಸಮಾಜ ಸುಧಾರಣೆಯ ಮತ್ತು ಜನ ಜಾಗೃತಿಯನ್ನುಂಟು ಮಾಡುವ ಕಾರ್ಯಕ್ರಮಗಳ ಮಾಹಿತಿಗಳನ್ನು ದೇಶದ ಎಲ್ಲ ಮೂಲೆ ಮೂಲೆಗಳಿಗೂ ತಲುಪಿಸುವುದು ಆಗಿನ ಸಮಾಚಾರ ಪತ್ರಿಕೆಗಳ ಮಹತ್ವದ ಹೊಣೆಯಾಗಿತ್ತು. ಆ ಕಾಲದಲ್ಲಿ ಸಮಾಚಾರ ಪತ್ರಿಕೆಗಳು ರಾಷ್ಟ್ರೀಯ ಶಿಲ್ಪಿಗಾರರಂತಿದ್ದವು. "ಕೇಸರಿ" ಗಳಂತಹ ಸಮಾಚಾರ ಪತ್ರಿಕೆಗಳನ್ನು ತರಿಸಿಕೊಂಡು ಹಳ್ಳಿಗಳಲ್ಲಿಯ ಜನರು ತಂಡ ತಂಡಗಳಾಗಿ ಸೇರಿಕೊಂಡು ಓದುತ್ತಿದ್ದ ಕಾಲವದು. ಆ ಕಾಲದಲ್ಲಿ ಅಂದರೆ ಕ್ರಿ.ಶ. ೧೮೯೬ನೇ ಇಸ್ವಿಯಲ್ಲಿ ಹಂಚಿನಾಳಕ್ಕೆ ಬಂದಿರುವ "ಸುಧಾರಕ" ಎಂಬ ಹೆಸರಿನ ಸಮಾಚಾರ ಪತ್ರಿಕೆಯು ಇಲ್ಲಿಯ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಕಾಗದಗಳ ಗಂಟಿನಲ್ಲಿ ಇರುತ್ತದೆ. ಶಿರಸಂಗಿ ಸಂಸ್ಥಾನದ ಸಂಸ್ಥಾನಿಕರು ಬ್ರಿಟಿಷರೊಡನೆ ಹೋರಾಟ ನಡೆಸಲಿಲ್ಲ. ಆ ಕಾರಣಕ್ಕಾಗಿ ಅದರ ಆಡಳಿತ ವ್ಯಾಪ್ತಿಗೆ ಒಳಪಟ್ಟಿದ್ದ ಈ ಹಂಚಿನಾಳ ಗ್ರಾಮಕ್ಕೂ ಸಹಿತ ಸ್ವಾತಂತ್ರ್ಯ ಹೋರಾ

ಟದ ಬಿಸಿಯು ತಲುಪಲಿಲ್ಲ ಎಂದು ಹೇಳಬಹುದು. ಆದರೂ ಸಹಿತ ರಾಷ್ಟ್ರೀಯತೆಯ ಬೀಜವನ್ನು ಬಿತ್ತಬಲ್ಲ "ಸುಧಾರಕ" ದಂತಹ ಸಮಾಚಾರ ಪತ್ರಿಕೆಗಳು ಆ ಕಾಲದಲ್ಲಿ ಹಂಚಿನಾಳ ಗ್ರಾಮಕ್ಕೆ ಬರುತ್ತಿದ್ದವು ಎಂಬುದು ಇಲ್ಲಿ ಗಮನಾರ್ಹವಾದ ಸಂಗತಿಯಾಗಿರುವುದು. ಶ್ರೀ ಗುರು ಷಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಕೇವಲ ಶಿವಯೋಗ ಮಂದಿರದಂತಹ ಧಾರ್ಮಿಕ ಸಂಸ್ಥೆಗಳ ಸಮಾಚಾರಗಳನ್ನಷ್ಟೇ ಅಲ್ಲದೆ ಸಮಾಜ ಸುಧಾರಣೆ ಮತ್ತು ರಾಷ್ಟ್ರೀಯತೆಯ ಪ್ರಸಾರದಲ್ಲಿ ತೊಡಗಿರುವ ಸಂಘ ಸಂಸ್ಥೆಗಳ ಸಮಾಚಾರಗಳನ್ನೂ ಸಹಿತ ಸಂಗ್ರಹಿಸುತ್ತಿದ್ದರು ಎಂಬುದು ಇದರಿಂದ ವ್ಯಕ್ತವಾಗುತ್ತದೆ.

## ಧರ್ಮ ಜಾಗೃತಿಗಾಗಿ ಸಂಚಾರ

ನಿತ್ಯ ಲಿಂಗಾರ್ಚನೆಯನ್ನು ಮಾಡಿ ಭಕ್ತರ ಕಲ್ಯಾಣಕ್ಕಾಗಿ ದೇಶವನ್ನು ಸಂಚರಿಸುವ ಗುರುವರನೇ ದೇಶಿಕನೆನಿಸಿಕೊಳ್ಳುವನು- ಅವನು ಶಿವಾನುಭಾವಾನಂದದಲ್ಲಿ ತಲ್ಲೀನನಾಗಿ ತನ್ನ ಅನುಭವೋಪದೇಶದಿಂದ ಶಿಷ್ಯರನ್ನು ಉಲ್ಲಾಸಗೊಳಿಸುವನು. ಮನಸ್ಸಿನ ಸಂಕಲ್ಪ-ವಿಕಲ್ಪಗಳನ್ನು ನಾಶ ಮಾಡುವನು. ಫಲಾಪೇಕ್ಷೆಯಿಂದ ಮಾಡುವ ಕಾರ್ಯಗಳು ಸಂಕಲ್ಪಿತವೆನಿಸಿಕೊಳ್ಳುತ್ತವೆ. ಅಂಥಹ ಸಂಕಲ್ಪಗಳನ್ನು ನಾಶಮಾಡಿ ನಿಷ್ಕಾಮ ಭಕ್ತಿಯನ್ನು ಬೆಳೆಸುವನು. ನಿಷ್ಕಾಮ ಭಕ್ತಿಯು ಅಳವಡಲೆಂದು ಶಿಷ್ಯನ ಆಣವಮಲ, ಮಾಯಾಮಲ, ಕಾರ್ಮಿಕ ಮಲಗಳೆಂಬ ತ್ರಿದೋಷಗಳನ್ನು ಕಳೆದು ತನು-ಮನ-ಧನಗಳನ್ನು ಪರಿಶುದ್ಧಗೊಳಿಸುವನು.

ಶ್ರೀ ಕಾಶೀ ಜಗದ್ಗುರು ಪೀಠವನ್ನು ಜ್ಞಾನಸಿಂಹಾಸನ ಎಂಬುದಾಗಿಯೂ ಕರೆಯುತ್ತಾರೆ. ಆ ಪೀಠ ಪರಂಪರೆಯನ್ನು ಹೊಂದಿರುವ ಈ ಹಂಚಿನಾಳ ಶ್ರೀ ಹಿರೇಮಠವು ಹೆಸರಿಗೆ ತಕ್ಕಂತೆ ಹಿರಿಯ ಮಠವಾಗಿತ್ತಷ್ಟೇ ಅಲ್ಲದೇ ಜ್ಞಾನದ ಕೇಂದ್ರಸ್ಥಾನವೆನಿಸಿಕೊಂಡು ಸುತ್ತ ಮುತ್ತಲಿನ ಊರುಗಳಲ್ಲಿ ಹೆಸರುವಾಸಿಯಾಗಿತ್ತು. ಬಹುಕಾಲದಿಂದ ಈ ಹಂಚಿನಾಳ ಶ್ರೀ ಹಿರೇಮಠಕ್ಕೆ ನಡೆದುಕೊಳ್ಳುತ್ತ ಬಂದಿರುವ ಸದ್ಭಕ್ತರ ಊರುಗಳಿಗೆ ಹೋಗುವುದು ಮತ್ತು ಅಲ್ಲಿ ಜ್ಞಾನದಾಸೋಹವನ್ನು ನಡೆಸುವುದು ಪಟ್ಟಾಧ್ಯಕ್ಷರು

ಗಳ ಕರ್ತವ್ಯಗಳಲ್ಲಿ ಒಂದಾಗಿರುತ್ತದೆ. ಪಾದಚಾರಿಗಳಾಗಿ ಊರಿಂದೂರಿಗೆ ಸಂಚರಿಸುವ ಇಂತಹ ಜಂಗಮ ಮೂರ್ತಿಗಳಿಗೆ ಚರಮೂರ್ತಿ ಎಂಬ ಹೆಸರೂ ಸಹ ರೂಢಿಯಲ್ಲಿರುತ್ತದೆ.

ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರು ಹಿರೇಕುಂಬಿ, ಉಗರಗೋಳ, ಹೂಲಿ ಗ್ರಾಮಗಳಷ್ಟೇ ಅಲ್ಲದೇ ಸವದತ್ತಿ, ಧಾರವಾಡ ತಾಲೂಕಿನ ಹೆಬ್ಬಳ್ಳಿ ಮತ್ತು ಮಾಡಲಗಿ, ನವಲಗುಂದ ತಾಲೂಕಿನ ಶಿರಕೋಳ, ಬಳ್ಳೂರು ಜ್ಯಾವೂರು, ಹನಸಿ, ಬ್ಯಾಲ್ಯಾಳ, ಮತ್ತು ತುಪ್ಪದ ಕುರ್ಹಟ್ಟಿ, ಕೌಜಗೇರಿ ಸಿಸ್ವಿನಹಳ್ಳಿ ಮುಂತಾದ ಹಲವಾರು ಗ್ರಾಮಗಳಲ್ಲಿ ಸಂಚರಿಸುತ್ತಿದ್ದರೆಂಬುದು ಲಭ್ಯವಿರುವ ಕೆಲವು ಹಳೆಕಾಲದ ಪತ್ರಗಳಿಂದ ತಿಳಿದು ಬರುತ್ತದೆ.

ಅವುಗಳಲ್ಲಿ ಒಂದು ಪತ್ರವು ತುಪ್ಪದ ಕುರ್ಹಟ್ಟಿಯ ಶ್ರೀಯುತ ಮಲ್ಲನಗೌಡಾ ಜಕ್ಕನಗೌಡರ ಎಂಬವನಿಂದ ಬಂದಿರುತ್ತದೆ. ಈ ಪತ್ರವು ಶಾಲಿವಾಹನ ಶಕೆ ೧೮೦೬ ತಾರಣ ನಾಮ ಸಂವತ್ಸರ ಪುಷ್ಯ ಶುದ್ಧ ೪ ರಂದು ಬರೆಯಲ್ಪಟ್ಟಿದೆ. ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಿಗೆ ಬಂದಿರುವ ಈ ಪತ್ರದಲ್ಲಿ ಮಲ್ಲನಗೌಡನು ನವಲಗುಂದ ಗವಿಮಠದ ಆಗಿನ ಸ್ವಾಮಿಗಳನ್ನು ಕುರಿತು ವಿಚಾರಿಸಿರುವನು.

ಇಂತಹ ಇನ್ನೊಂದು ಪತ್ರವು ಸದ್ಭಕ್ತನಾದ ಕೌಜಗೇರಿ ಗ್ರಾಮದ ಹನಮಂತಗೌಡಾ ಮುಲ್ಕಿಪಾಟೀಲ ಎಂಬವನಿಂದ ಬಂದಿರುತ್ತದೆ. ಶಾಲಿವಾಹನ ಶಕೆ ೧೮೦೭ ಪಾರ್ಥಿವನಾಮ ಸಂವತ್ಸರ ಶ್ರಾವಣ ಬಹುಳ ೮ ರಂದು ಬರೆಯಲ್ಪಟ್ಟಿರುವ ಈ ಪತ್ರದಲ್ಲಿ ಶ್ರೀಯುತ ಹನಮಂತಗೌಡನು ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಿಗೆ ತಾವು ಕೊಡುವ ಕಾಣಿಕೆಯನ್ನು ಯಾರ ಕೈಯಲ್ಲಿ ಕೊಡಬೇಕು ಎಂಬುದಾಗಿ ಕೇಳಿರುವನು. ಪಟ್ಟಾಧ್ಯಕ್ಷರ ಪೂರ್ವಾಶ್ರಮದ ಸಂಬಂಧಿಕರಲ್ಲಿ ಕೆಲವರು ಬಂದು ಮಠದ ಕಾಣಿಕೆಯನ್ನು ತಮ್ಮ ಕೈಯಲ್ಲಿ ಕೊಡಬೇಕೆಂಬುದಾಗಿ ಹಟ ಹಿಡಿದಿರುತ್ತಾರೆ. ಆದ್ದರಿಂದ ಶ್ರೀಯುತ ಹನಮಂತಗೌಡನು ಈ ಪತ್ರವನ್ನು ಒಬ್ಬ ಮನುಷ್ಯನ ಮುಖಾಂತರ ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಿಗೆ ಕಳಿಸಿರುತ್ತಾನೆ.

## ವೈರಾಗ್ಯದ ಸತ್ವ ಪರೀಕ್ಷೆ

ಈ ಮೊದಲೇ ತಿಳಿಸಿರುವಂತೆ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಪೂರ್ವಾಶ್ರಮದ ತಂದೆಯ ಹೆಸರು ಶ್ರೀಯುತ ಚರಂತಯ್ಯ. ಈ ಚರಂತಯ್ಯನವರಿಗೆ ಸಿದ್ಧಲಿಂಗಯ್ಯ ಮತ್ತು ಮಳ್ಳಯ್ಯ (ಮರಳಯ್ಯ) ಎಂಬ ಇನ್ನಿಬ್ಬರು ಗಂಡು ಮಕ್ಕಳಿರುತ್ತಾರೆ. ಈ ಸಿದ್ಧಲಿಂಗಯ್ಯ ಮತ್ತು ಮಳ್ಳಯ್ಯ ಇವರಿಬ್ಬರೂ ಗೃಹಸ್ಥಾಶ್ರಮಿಗಳು. ಅವರಿಬ್ಬರಿಗೂ ಬಹಳ ದಿವಸಗಳ ವರೆಗೆ ಮಕ್ಕಳೇ ಆಗುವದಿಲ್ಲ. ಬಹಳ ದಿವಸಗಳ ನಂತರ ಶ್ರೀಯುತ ಮಳ್ಳಯ್ಯನವರಿಗೆ ಏಕಮಾತ್ರ ವಂಶೋಧ್ಧಾರಕ ಪುತ್ರನು ಜನಿಸುತ್ತಾನೆ. ಆ ಏಕಮಾತ್ರ ವಂಶೋದ್ಧಾರಕ ಪುತ್ರನಿಗೆ ಅವನ ಅಜ್ಜ ಶ್ರೀಯುತ ಚರಂತಯ್ಯನವರ ಹೆಸರನ್ನೆ ಇಡುತ್ತಾರೆ. ಕೆಲವು ದಿವಸಗಳ ನಂತರ ಶ್ರೀಯುತ ಸಿದ್ಧಲಿಂಗಯ್ಯನವರಿಗೂ ಏಕಮಾತ್ರ ಪುತ್ರಿಯು ಜನಿಸುತ್ತಾಳೆ. ಅವಳಿಗೆ ಗಂಗವ್ವ ಎಂಬ ಹೆಸರನ್ನಿಡುತ್ತಾರೆ. ಈ ಏಕಮಾತ್ರ ಪುತ್ರ ಚರಂತಯ್ಯ ಮತ್ತು ಏಕಮಾತ್ರ ಪುತ್ರಿ ಗಂಗವ್ವ ಇವರುಗಳಿಂದ ಆ ಮನೆತನದ, ಆ ವಂಶದ ಬಳ್ಳಿಯು ಮುಂದುವರಿಯುತ್ತದೆ. ಶ್ರೀಯುತ ಮಳ್ಳಯ್ಯನವರಿಗೆ ಆ ಏಕಮಾತ್ರ ಪುತ್ರ ಚರಂತಯ್ಯನು ವಂಶೋದ್ಧಾರಕನಾಗಿ ಜನಿಸುವುದಕ್ಕಿಂತ ಪೂರ್ವದಲ್ಲಿ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಜೀವನದಲ್ಲಿ ಯಾವ ಒಂದು ಅಪೂರ್ವವಾದ ಘಟನೆಯು ಜರುಗಿತು ಎಂಬುದನ್ನು ನಾವಿಲ್ಲಿ ಗಮನಿಸೋಣ.

ಶ್ರೀಯುತ ಮಳ್ಳಯ್ಯನವರಿಗೆ ಚರಂತಯ್ಯ ಎಂಬ ಹೆಸರಿನ ಏಕಮಾತ್ರ ಪುತ್ರನು ಜನಿಸುವುದು ಬಹಳ ವಿಳಂಬವಾದ ಕಾರಣ ಮತ್ತು ಶ್ರೀಯುತ ಸಿದ್ಧಲಿಂಗಯ್ಯನವರಿಗೆ ಗಂಡು ಸಂತಾನವೇ ಇಲ್ಲದಿರುವ ಕಾರಣ ಹಂಚಿನಾಳದ ಈ ಜಂಗಮ ಮನೆತನದ ಬಳ್ಳಿಯು ಇಲ್ಲಿಗೇ ಕೊನೆಗೊಳ್ಳುವುದೇನೋ ಎಂಬ ಸಂದೇಹವು ಕೆಲವು ಜನ ಗ್ರಾಮಸ್ಥರಲ್ಲಿ ಮೂಡುತ್ತದೆ. ಗುರುಸ್ಥಾನದ ಮಹಿಮೆಯನ್ನಾಗಲೀ ಅಥವಾ ಸಂನ್ಯಾಸ ಧರ್ಮದ ಶ್ರೇಷ್ಠತೆಯನ್ನಾಗಲೀ ಅರಿತುಕೊಳ್ಳಲು ಅಸಮರ್ಥರಾದ ಮತ್ತು ಮೂಢ ಭಕ್ತಿ

ಯಿಂದೊಡಗೂಡಿದ ಹಂಚಿನಾಳ ಗ್ರಾಮದ ಕೆಲವು ಅಜ್ಞಾನಿ ಮುಖಂಡರು ಹಂಚಿನಾಳ ಶ್ರೀ ಹಿರೇಮಠದ ಆಗಿನ ಪಟ್ಟಾಧ್ಯಕ್ಷರಾಗಿದ್ದ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗೆ ಮದುವೆ ಮಾಡುವುದಕ್ಕೆ ಪ್ರಯತ್ನಿಸುತ್ತಾರೆ. ಅವರ ಪೂರ್ವಾಶ್ರಮದ ಮನೆತನದ ಬಳ್ಳಿಯು ಅವರಿಂದ ಮುಂದುವರಿಯಬೇಕು ಎಂಬುದಾಗಿ ಆ ಮುಖಂಡರು ಬಯಸುತ್ತಾರೆ. ಅವರ ಈ ಜಂಗಮ ಭಕ್ತಿಯು ಅಜ್ಞಾನದಿಂದ ಕೂಡಿದ ಮೂಢ ಭಕ್ತಿಯಾಗಿರುತ್ತದೆ. ಆ ಅಜ್ಞಾನಿ ಮುಖಂಡರು ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗೆ ತಿಳಿಯದ ರೀತಿಯಲ್ಲಿ, ಮದುವೆಯ ಸಕಲ ಸಿದ್ಧತೆಗಳನ್ನು ಮಾಡಿಕೊಂಡು, ಯಾವುದೋ ಒಂದು ಸುಳ್ಳು ನೆಪವನ್ನು ಮುಂದೆ ಮಾಡಿಕೊಂಡು ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳನ್ನು ಮದುವೆಯ ಮಂಟಪಕ್ಕೆ ಕರೆದೊಯ್ಯುತ್ತಾರೆ. ಅಲ್ಲಿ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗೇನೇ ಬಾಸಿಂಗವನ್ನು ಕಟ್ಟಲು ಬರುತ್ತಾರೆ. ಆಗ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಒಮ್ಮೆಲೇ ಆ ಬಾಸಿಂಗವನ್ನು ಕಸಿದುಕೊಂಡು ಅಲ್ಲಿಯೇ ಅದನ್ನು ಅಗ್ನಿಗಾಹುತಿ ಮಾಡಿಬಿಡುತ್ತಾರೆ. ಮದುವೆಯ ಮಂಟಪವೊಂದರಲ್ಲಿ ಜರುಗಿದ ಇಂತಹ ಅಪೂರ್ವವಾದ ಘಟನೆಯನ್ನು ಕಂಡು, ಅಲ್ಲಿ ನೆರೆದ ಜನರು ಭಯಭೀತರಾಗಿ ಅಲ್ಲಿಂದ ಓಡಿ ಹೋಗುತ್ತಾರೆ.

ಈ ಮದುವೆಯ ಕಾರ್ಯವನ್ನು ನಿಯೋಜಿಸಿದ ಹಂಚಿನಾಳ ಗ್ರಾಮದ ಆ ಅಜ್ಞಾನಿ ಮುಖಂಡರು ಇತ್ತ ಕಡೆ ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಶಾಪಕ್ಕೂ ಗುರಿಯಾಗುತ್ತಾರೆ ಮತ್ತು ಅತ್ತ ಕಡೆ ತಾವು ಗೊತ್ತು ಮಾಡಿದ ಹೆಣ್ಣಿನ ಮನೆಯವರ ಕೋಪಕ್ಕೂ ಗುರಿಯಾಗುತ್ತಾರೆ. ಹಂಚಿನಾಳ ಗ್ರಾಮದ ಮುಖಂಡರು, ತಮ್ಮ ಮಗಳ ಮದುವೆಯನ್ನು, ಸಂನ್ಯಾಸ ಧರ್ಮ ಸ್ವೀಕರಿಸಿ ಒಂದು ಮಠದ ಪಟ್ಟಾಧ್ಯಕ್ಷರಾದವರೊಂದಿಗೆ ಮಾಡುತ್ತಿರುವರೆಂಬುದನ್ನು ತಿಳಿದಾಗ ಆ ಹೆಣ್ಣಿನ ಪಾಲಕರು, ಈ ಮುಖಂಡರಿಗೆ ಛೀ, ಥೂ, ಹಾಕಿದರಂತೆ.

ಆ ಮುಖಂಡರು ಮಾಡಿದ ಈ ಕಾರ್ಯಕ್ಕೆ ಅವರ ಅಜ್ಞಾನ ಮತ್ತು ಅವರ ಮೂಢ ಭಕ್ತಿಯೇ ಕಾರಣವಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಆದರೆ ಪ್ರತಿಯೊಬ್ಬ ವ್ಯಕ್ತಿಗೂ, ಪ್ರತಿಯೊಂದು ಕಾರ್ಯವನ್ನು ಮಾಡುವಂತೆ ಪ್ರೇರೇಪಿಸುವವನು ಆ ಸರ್ವವ್ಯಾಪಿ ಶಿವನೇ ಅಲ್ಲವೆ ? ಈ ಕಾರಣದಿಂದಾಗಿ ಆ ಮೂಢ ಭಕ್ತರಿಗೂ ಸಹ ಈ ಕಾರ್ಯವನ್ನು ಮಾಡುವ ಪ್ರೇರಣೆಯು ಆ ಶಿವನಿಂದಲೇ ದೊರೆಯಬೇಕಲ್ಲವೆ ? ಒಟ್ಟನಲ್ಲಿ ಈ ಘಟನೆಯು ಶ್ರೀಗುರು ಪಟದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗೆ ಆ ಸರ್ವಶಕ್ತ ಶಿವನು ತಂದೊಡ್ಡಿದ ಅವರ "ವೈರಾಗ್ಯದ ಸತ್ವಪರೀಕ್ಷೆ"ಯಾಗಿ ಪರಿಣಮಿಸುತ್ತದೆ.

ಶಿವನು ಭಕ್ತಪ್ರಿಯನಾಗಿರುತ್ತಾನೆ ಮತ್ತು ಭಕ್ತರ ಹೃದಯದಲ್ಲಿಯೇ ನೆಲೆಸಿರುತ್ತಾನೆ, ಎಂಬ ಮಾತು ಸುಳ್ಳೇನಲ್ಲ. ಆದರೆ ಶಿವನು ತನ್ನ ಭಕ್ತರು ಯಾರೇ ಆಗಿರಲಿ ಅವರನ್ನು ಚೆನ್ನಾಗಿ ಪರೀಕ್ಷಿಸದೇ ಬಿಡುವುದಿಲ್ಲ ಎಂಬುದು ಸತ್ಯ. ಇದಕ್ಕೆ ಈ ಕೆಳಗಿನ ಬಸವಣ್ಣನವರ ವಚನಗಳೇ ಸಾಕ್ಷಿಗಳಾಗಿವೆ.

ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ,
ಸಲೆಮಾರುವೋದೆನೆಂದರೆ
ತನುವನಲ್ಲಾಡಿಸಿ ನೋಡುವೆ ನೀನು
ಮನವನಲ್ಲಾಡಿಸಿ ನೋಡುವೆ ನೀನು!
ಧನವನಲ್ಲಾಡಿಸಿ ನೋಡುವೆ ನೀನು !
ಇವೆಲ್ಲಕಂಜದಿದ್ದರೆ
ಭಕ್ತಿಕಂಪಿತ ನಮ್ಮ ಕೂಡಲ ಸಂಗಮದೇವ.

ದೇವರನ್ನು ನೆಚ್ಚಿದೆ ಮೆಚ್ಚಿದೆನೆಂದರೆ, ಅವನಿಗೆ ತನ್ನ ಸರ್ವಸ್ವವನ್ನೂ ಮಾರುಗೊಟ್ಟು ದಾಸನಾದೆನೆಂದರೆ–ಆ ಬರಿಯ ಮಾತಿನಿಂದಲೇ ದೇವರು ಭಕ್ತನಿಗೆ ಒಲಿಯುವವನಲ್ಲ. ತನ್ನ ತನು–ಮನ–ಧನಗಳನ್ನು ಗುರು–ಲಿಂಗ–ಜಂಗಮಕ್ಕೆ ಅರ್ಪಿಸುವ ದಾಸೋಹ–ಭಾವ ಆ ಭಕ್ತನಲ್ಲಿ ಬೇರು ಬಿಟ್ಟಿರುವುದೋ ಇಲ್ಲವೋ ಎಂದು ದೇವರು ಭಕ್ತನನ್ನು ಅಲುಗಿಸಿ ಆಘಾತಿಸಿ ಪರೀಕ್ಷಿಸುವನು. ದೃಢವಾಗಿ ನಿಂತು ಉಗ್ರ ಪರೀಕ್ಷೆಗಳಲ್ಲಿ ತೇರ್ಗಡೆಯಾದಾಗ ಮಾತ್ರ ಆ ಭಕ್ತ ಶ್ರೇಷ್ಠನಿಗೆ ದೇವರು ತಾನೇ ಒಲಿದು ಓಗೊಡುತ್ತಾನೆ.

ಭಕ್ತನಾಗಿ ತನ್ನ ಹಿಡಿದೆನೆಂದು ಹೋದರೆ
ನುಗ್ಗು ಮಾಡುವ, ನುಸಿಯ ಮಾಡುವ,
ಮಣ್ಣು ಮಾಡುವ, ಮುಸಿಯ ಮಾಡುವ,
ಕೂಡಲ ಸಂಗಮದೇವರ ನೆರೆ ನಂಬಿದೆನಾದಡೆ
ಕಡೆಗೆ ತನ್ನಂತೆ ಮಾಡುವ.

ಶಿವಸ್ವರೂಪಿಗಳು ಎಂದೆನಿಸಿಕೊಳ್ಳುವ ಶಿವಯೋಗಿಗಳೂ ಸಹಿತ ದೇವರ ಈ ನಿಯಮಕ್ಕೆ ಹೊರತಾಗಿಲ್ಲ. ಅವರೂ ಸಹಿತ ಶಿವನ ಈ ಪರೀಕ್ಷಾ ಹಂತದಲ್ಲಿ ಹಾಯ್ದು ಬರಲೇಬೇಕು. ಆ ಉಗ್ರ ಪರೀಕ್ಷೆಯಲ್ಲಿ ಪಾಸಾದರೆ ಮಾತ್ರ ಶಿವನು ಅವರನ್ನು ಮುಂದೆ ಕರೆದುಕೊಳ್ಳುತ್ತಾನೆ. ಶಿವನು ತಂದೊಡ್ಡುವ ನಾನಾ ವಿಧದ ಕಷ್ಟ ಕೋಟಲೆಗಳನ್ನು ಎದುರಿಸಿ, ಆತನು ನಿರ್ಮಿಸಿದ ವ್ಯೂಹ ಗಳನ್ನೆಲ್ಲ ಭೇದಿಸಿ ವಿಜಯಶಾಲಿಗಳಾಗಿ ಹೊರಹೊಮ್ಮಿ ಕೊನೆಗೂ ಆ ಶಿವನನ್ನೇ ನೆರೆನಂಬಿ ಯಾರು ಶಿವಭಕ್ತಿಯನ್ನು ಮಾಡುತ್ತಾರೆಯೋ ಅಂತಹವರನ್ನು ಮಾತ್ರ ಆ ಶಿವನು ಪಾಸು ಮಾಡುತ್ತಾನೆ. ಶಿವನು ನಡೆಸುವ ಈ ಪರೀಕ್ಷೆ ಯಲ್ಲಿ ಪಾಸಾದವರನ್ನು ಆ ಶಿವನು ಕೊನೆಗೆ ತನ್ನಂತೆಯೇ ಮಾಡಿಕೊಳ್ಳು ತ್ತಾನೆ. ಅವರಿಗೆ ತನ್ನ ಸ್ವರೂಪವನ್ನೇ ಕರುಣಿಸುತ್ತಾನೆ. ಅಷ್ಟೇ ಏಕೆ ? ಅಂತಹವರ ಮನಸ್ಸಿನಲ್ಲಿ ಆ ಶಿವನು ಸದಾಕಾಲವೂ ನೆಲೆಸಿರುತ್ತಾನೆ.

ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿ ಗಳ ಜೀವನದಲ್ಲಿ ನಡೆದ ಅವರ ವೈರಾಗ್ಯದ ಸತ್ವಪರೀಕ್ಷೆಯು ಅವರು ಮದುವೆಯ ಮಂಟಪದಲ್ಲಿ ಬಾಸಿಂಗವನ್ನು ಅಗ್ನಿಗಾಹುತಿ ಮಾಡಿದ ಮಾತ್ರಕ್ಕೆ ಮುಕ್ತಾಯವಾಗುವದಿಲ್ಲ. ಈ ಮದುವೆಯ ಕಾರ್ಯವನ್ನು ನಿಯೋಜಿಸಿದ ಆ ಮುಖಂಡರು ತಾವು ಮಾಡಿದ ಕಾರ್ಯವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ಯೇನೋ ಎಂಬಂತೆ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಜೊತೆಗೆ ಮದುವೆ ಮಾಡಬೇಕೆಂದುಕೊಂಡಿದ್ದ ಆ ಮದುಮಗಳನ್ನು ಹಂಚಿನಾಳ ಗ್ರಾಮಕ್ಕೂ ಸಹ ಕರೆದುಕೊಂಡು ಬರುತ್ತಾರೆ.

ಸುಮಾರು ಹತ್ತೊಂಭತ್ತನೆಯ ಶತಮಾನದ ಮುಕ್ತಾಯದ ಅವಧಿ ಯಲ್ಲಿ ಹಂಚಿನಾಳದ ಶ್ರೀಗುರು ಪಡದಯ್ಯ (ಉರ್ಫ ಮಹದೇವ)

ಶಿವಾಚಾರ್ಯ ಸ್ವಾಮಿಗಳ ಜೀವನದಲ್ಲಿ ನಡೆದ ಈ ಅಪೂರ್ವವಾದ ಘಟನೆಯು ಸ್ವಲ್ಪಮಟ್ಟಿಗೆ ಹನ್ನೆರಡನೆಯ ಶತಮಾನದಲ್ಲಿ ಅಲ್ಲಮ ಪ್ರಭುವಿನ ಮತ್ತು ಅಕ್ಕಮಹಾದೇವಿಯ ಜೀವನದಲ್ಲಿ ಜರುಗಿದ ಘಟನೆಗಳನ್ನು ಹೋಲುತ್ತದೆ. ಅಕ್ಕಮಹಾದೇವಿಯು ವೀರ ವಿರಾಗಿಣಿಯಾಗಿರುತ್ತಾಳೆ. ಆದರೂ ಸಹಿತ ಶಿವನು ಕೌಶಿಕನೆಂಬ ಒಬ್ಬ ಕಾಮುಕ ರಾಜನನ್ನು ಮುಂದೆ ಮಾಡಿಕೊಂಡು ಅವಳ ವೈರಾಗ್ಯದ ಸತ್ವ ಪರೀಕ್ಷೆಯನ್ನು ಮಾಡುತ್ತಾನೆ. ಇನ್ನು ಮಾಯಾದೇವಿ ಎಂಬ ಅತ್ಯಂತ ಸುಂದರ ರಾಜಕುಮಾರಿಯನ್ನು ಮುಂದೆ ಮಾಡಿಕೊಂಡು ಶಿವನು ಅಲ್ಲಮಪ್ರಭುದೇವರ ವೈರಾಗ್ಯದ ಸತ್ವಪರೀಕ್ಷೆಯನ್ನು ಮಾಡುತ್ತಾನೆ. ಅದೇ ರೀತಿ ಶಿವನು ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ವೈರಾಗ್ಯದ ಸತ್ವಪರೀಕ್ಷೆಯನ್ನು ಮಾಡಲು ಮುಂದಾಗುತ್ತಾನೆ. ಲೋಕೋದ್ಧಾರವನ್ನು ಮಾಡುವದಕ್ಕಾಗಿ ಸಂನ್ಯಾಸ ಧರ್ಮ ಸ್ವೀಕರಿಸಿರುವ ಅವರಿಗೆ ಶಿವನು ವಂಶೋದ್ಧಾರದ ಆಮಿಷವನ್ನು ತಂದೊಡ್ಡುತ್ತಾನೆ.

ಅಂತಹ ಸಂದರ್ಭದಲ್ಲಿ ಲೌಕಿಕರು ಎನಿಸಿಕೊಳ್ಳುವ ಜನಸಾಮಾನ್ಯರಾದ ನಮ್ಮಂತವರು ಮದುವೆ ಮಾಡಿಕೊಂಡು ಲೌಕಿಕ ಸುಖಭೋಗಗಳನ್ನು ಅನುಭೋಗಿಸುತ್ತ ತಂದೆ ತಾಯಿಗಳ ಮನೆಯನ್ನು ಬೆಳಗಿಸಬಲ್ಲ ದೀಪವನ್ನು ಹಚ್ಚಿ ವಂಶೋದ್ಧಾರವನ್ನು ಮಾಡುವುದು ಯೋಗ್ಯವಾದ ವಿಚಾರವೆನಿಸಿಕೊಳ್ಳುತ್ತದೆ. ಇಂತಹ ಸಂದರ್ಭಗಳಲ್ಲಿ ಈ ರೀತಿ ವಿಚಾರ ಮಾಡುವುದೇ ಲೌಕಿಕರಧರ್ಮ ಅಥವಾ ಕರ್ತವ್ಯ ಎಂದೆನಿಸಿಕೊಳ್ಳುತ್ತದೆ. ಶ್ರೀಗುರುಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ವೈರಾಗ್ಯದ ಸತ್ವಪರೀಕ್ಷೆಯು ಪ್ರಾರಂಭವಾದ ಸಂದರ್ಭದಲ್ಲಿ ಹಂಚಿನಾಳ ಗ್ರಾಮದ ಕೆಲವು ಮುಖಂಡರೂ ಸಹಿತ ಇದೇ ರೀತಿ ವಿಚಾರ ಮಾಡಿದ್ದರು. ಅಂತಹ ಸಂದರ್ಭಗಳಲ್ಲಿ ಮದುವೆ ಮಾಡಿಕೊಂಡು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಮಕ್ಕಳನ್ನು ಹುಟ್ಟಿಸಿ ವಂಶೋದ್ಧಾರ ಮಾಡುವುದೇ ಪ್ರತಿಯೊಬ್ಬ ಮಾನವನ ಕರ್ತವ್ಯ ಎಂಬುದಾಗಿ ಆ ಮುಖಂಡರು ತಿಳಿದಿದ್ದರು. ಇದು ಪ್ರತಿಯೊಬ್ಬ ಜನಸಾಮಾನ್ಯನಿಗೂ ಅನ್ವಯಿಸುವ ವಿಚಾರವೇ ಆಗಿರುವುದು. ಆದರೆ

ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಜನಸಾಮಾನ್ಯರಾಗಿರಲಿಲ್ಲ. ಅವರು ನಮ್ಮಂತೆ ಲೌಕಿಕ ಮಾನವರಾಗಿರಲಿಲ್ಲ. ಅವರು ಶ್ರೀಗುರುವಿನ ಸನ್ನಿಧಿಯಲ್ಲಿ ವಿಧಿವತ್ತಾಗಿ ಸಂನ್ಯಾಸ ದೀಕ್ಷೆಯನ್ನು ಸ್ವೀಕರಿಸಿದಾಗಲೇ ಅಸಾಮಾನ್ಯರೆಂದೆನಿಸಿಕೊಂಡಿದ್ದರು. ಅವರು ಅಲೌಕಿಕ ಪುರುಷರಾಗಿದ್ದರು. ಅವರು ಜನಸಾಮಾನ್ಯರು ಬಯಸುವ ಸ್ವಾರ್ಥಗಳನ್ನು ತ್ಯಾಗಮಾಡಿ ಲೋಕಕಲ್ಯಾಣದ ಮಹಾಮಣಿಹವನ್ನು ಹೊತ್ತುಕೊಂಡಿದ್ದರು.

ಸ್ವಾರ್ಥವನ್ನು ತ್ಯಜಿಸಿ ಲೋಕಕಲ್ಯಾಣವನ್ನು ಸಾಧಿಸುವುದೇ ಸಂನ್ಯಾಸ ಧರ್ಮದ ಉದ್ದೇಶವಾಗಿರುತ್ತದೆ. ಈ ಉದಾತ್ತವಾದ ಧ್ಯೇಯವನ್ನು ಹೊಂದಿರುವುದರಿಂದಲೇ ಸಂನ್ಯಾಸ ಧರ್ಮವು ಶ್ರೇಷ್ಠವಾದದ್ದೆನಿಸಿಕೊಳ್ಳುತ್ತದೆ. ಸಂನ್ಯಾಸ ದೀಕ್ಷೆಯನ್ನು ಸ್ವೀಕರಿಸುವ ಸಂದರ್ಭದಲ್ಲಿ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಕೈಕೊಂಡ ಪ್ರತಿಜ್ಞೆಯು ಭೀಷ್ಮ ಪ್ರತಿಜ್ಞೆಯಾಗಿತ್ತು. ಅವರ ಆ ಪ್ರತಿಜ್ಞೆಯು ಪ್ರಜ್ಞಾಪೂರ್ವಕವಾಗಿ ಮಾಡಿದ ಪ್ರತಿಜ್ಞೆಯಾಗಿತ್ತು. ಅವರು ತಾವು ಮಾಡುತ್ತಿರುವ ಪ್ರತಿಜ್ಞೆಯ ಉದ್ದೇಶವನ್ನು ಮತ್ತು ಅದರ ಪರಿಣಾಮವನ್ನು ಸಂಪೂರ್ಣವಾಗಿ ತಿಳಿದುಕೊಂಡಿರುತ್ತಾರೆ. ವೈರಾಗ್ಯ ಎಂಬುದು ಹೊರಗಿನಿಂದ ಬರುವುದಲ್ಲ. ಅದು ಒಳಗಿನಿಂದ ಬರುತ್ತದೆ.ಶ್ರೀಗುರುವು ತನ್ನ ಉತ್ತರಾಧಿಕಾರಿಯಾಗುವವನಿಗೆ ಸಂನ್ಯಾಸ ದೀಕ್ಷೆಯನ್ನು ನೀಡುವಾಗ ಈ ಎಲ್ಲ ಅಂಶಗಳನ್ನು ನಾನಾ ರೀತಿಯಿಂದ ಬಹು ಸೂಕ್ಷ್ಮವಾಗಿ ಪರೀಕ್ಷಿಸಿಯೇ ಅಧಿಕಾರವನ್ನು ನೀಡುತ್ತಾನೆ. ಈ ಎಲ್ಲ ವಿಷಯಗಳ ಸಂಪೂರ್ಣ ಜ್ಞಾನವು ಹಂಚಿನಾಳ ಗ್ರಾಮದ ಆ ಕೆಲವು ಮುಖಂಡರಿಗೆ ಇರಲಿಲ್ಲ ಎನ್ನುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ಕಾರಣದಿಂದಲೇ ಅವರಿಗೆ ಅಜ್ಞಾನಿಗಳು ಎಂದೆನ್ನಬೇಕಾಗುತ್ತದೆ.

ಆ ಮುಖಂಡರು ತಮ್ಮ ಅಜ್ಞಾನದ ಕಾರಣದಿಂದಾಗಿಯೇ ಶ್ರೀಗುರು ಪಟದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಮದುವೆ ಮಾಡಲು ಮುಂದಾಗುತ್ತಾರೆ. ಮದುವೆ ಮಂಟಪವೊಂದರಲ್ಲಿ ತಮಗೆ ಕಟ್ಟಲು ಬಂದ ಬಾಸಿಂಗವನ್ನು ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಕಸಿದುಕೊಂಡು ಅಗ್ನಿಗಾಹುತಿ ಮಾಡುವವರೆಗಿನ

ಹಂತವು ಅವರ ವೈರಾಗ್ಯದ ಸತ್ವಪರೀಕ್ಷೆಯಲ್ಲಿನ ಪ್ರಥಮ ಹಂತವಾಗಿತ್ತು. ಪರೀಕ್ಷೆಯ ಎರಡನೆಯ ಮತ್ತು ಅತಿ ಮುಖ್ಯವಾದ ಹಂತವು ತದ ನಂತರ ಪ್ರಾರಂಭವಾಗುತ್ತದೆ. ಅವರ ಜೊತೆಗೆ ಮದುವೆ ಮಾಡಬೇಕೆಂದು ಗೊತ್ತು ಮಾಡಿದ ಆ ಹೆಣ್ಣು ಮಗಳನ್ನು ಮುಖಂಡರು ಯಾವಾಗ ಹಂಚಿನಾಳ ಗ್ರಾಮಕ್ಕೂ ಕರೆದುಕೊಂಡು ಬಂದರೋ ಆಗ ಪರೀಕ್ಷೆಯ ಎರಡನೆಯ ಹಂತವು ಪ್ರಾರಂಭವಾಗುತ್ತದೆ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಮದುವೆ ಆಗಲು ನಿರಾಕರಿಸಿದರೆ ಏನಂತೆ, ಹೆಣ್ಣಿನ ಜೊತೆಗಿನ ಸಂಪರ್ಕವು ಹೆಚ್ಚುತ್ತಾ ಹೋದರೆ ಅವರ ವೈರಾಗ್ಯ ಮತ್ತು ಸಂನ್ಯಾಸಗಳು ತಾವಾಗಿಯೇ ಕರಗಿ ಹೋಗುತ್ತವೆ ಎಂಬುದಾಗಿ ಆ ಮುಖಂಡರು ಯೋಚಿಸುತ್ತಾರೆ.

ಶಿವನು ತನ್ನ ಭಕ್ತರನ್ನು ಪರೀಕ್ಷೆಗೆ ಗುರಿ ಪಡಿಸುವುದಕ್ಕಾಗಿ ಎಂತಹ ಪರಿಸ್ಥಿತಿಗಳನ್ನು ನಿರ್ಮಿಸುತ್ತಾನೆ ಎಂಬುದು ನಮ್ಮ ಊಹೆಗೂ ನಿಲುಕಲಾರದಷ್ಟು ಸೂಕ್ಷ್ಮವಾಗಿರುತ್ತದೆ. ವೈರಾಗ್ಯ ಪಥದಲ್ಲಿ ಮುಂದುವರಿಯುತ್ತೇನೆ, ಎನ್ನುತ್ತಲಿದ್ದ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳನ್ನು ಹಿಮ್ಮೆಟ್ಟಿಸಿಯೇ ತೀರುತ್ತೇನೆ ಎಂಬುದು ಆ ದೇವರ ಭಾಷೆಯಾಗಿತ್ತು. ಅವರನ್ನು ವೈರಾಗ್ಯ ಪಥದಿಂದ ಹಿಮ್ಮೆಟ್ಟಿಸುವುದಕ್ಕೆ ಅವಶ್ಯವಿರುವ ಎಲ್ಲ ವ್ಯೂಹಗಳನ್ನು ಶಿವನು ಬಲು ಸಹಜವೆನಿಸುವ ರೀತಿಯಲ್ಲಿ ನಿರ್ಮಿಸಿ ಬಿಟ್ಟಿದ್ದನು. ಆ ಸಂದರ್ಭದಲ್ಲಿ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗೆ "ನೀನು ವೈರಾಗ್ಯ ಪಥದಲ್ಲಿಯೇ ಮುಂದುವರಿಯಬೇಕು" ಎನ್ನುವವರು ಯಾರೂ ಇರಲಿಲ್ಲ. ಅವರಿಗೆ "ಮದುವೆ ಆಗಬೇಡ" ಎನ್ನುವವರೂ ಸಹಿತ ಯಾರೂ ಇರುವದಿಲ್ಲ. ಇಷ್ಟೇ ಏಕೆ? ಅವರಿಗೆ "ನೀನು ಮದುವೆ ಮಾಡಿಕೊಳ್ಳಲೇಬೇಕು" ಎಂಬ ಒತ್ತಡವು ಮುಖಂಡರೆನಿಸಿಕೊಳ್ಳುವ ಮೂಢ ಭಕ್ತರಿಂದ ಬಂದೊದಗುತ್ತದೆ. ಆ ಸಂದರ್ಭದಲ್ಲಿ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ತಮ್ಮ ಸಂನ್ಯಾಸ ಧರ್ಮವನ್ನು ಕೈಬಿಡಬಹುದಾಗಿತ್ತು "ನೀನು ಸಂನ್ಯಾಸ ಧರ್ಮವನ್ನು ಏಕೆ ಕೈಬಿಟ್ಟಿ" ಎಂಬುದಾಗಿ ಅವರನ್ನು ಕೇಳುವವರು ಆಗ ಯಾರೂ ಇರುವದಿಲ್ಲ. ಅವರು ತಮ್ಮ ಗುರುವಿನ ಸನ್ನಿಧಿಯಲ್ಲಿ ಪ್ರಜ್ಞಾ

ಪೂರ್ವಕವಾಗಿ ಕೈಕೊಂಡ ಪ್ರತಿಜ್ಞೆಯನ್ನು ಮರೆತು ಬಿಡಬಹುದಾಗಿತ್ತು. "ನೀನು ಸಂನ್ಯಾಸ ಧರ್ಮವನ್ನು ಗಟ್ಟಿಯಾಗಿ ಹಿಡಿದುಕೊಂಡು ಸ್ವಾರ್ಥ ರಹಿತನಾಗಿ ಲೋಕಕಲ್ಯಾಣಕ್ಕಾಗಿ ಧರ್ಮವನ್ನು ರಕ್ಷಿಸು" ಎಂಬುದಾಗಿ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗೆ ಆ ಸಂದರ್ಭದಲ್ಲಿ ಹೇಳುವವರು ಯಾರೂ ಇರಲಿಲ್ಲ. ಧರ್ಮ ರಕ್ಷಣೆಗಾಗಿ ಶಿವನಾಜ್ಞೆಯನ್ನು ಪಡೆದು ಧರೆಗಿಳಿದು ಬಂದ ಅವರನ್ನು ಆ ಶಿವನೇ ಈ ರೀತಿಯ ವ್ಯೂಹದಲ್ಲಿ ಸಿಲುಕಿಸುವುದರ ಮೂಲಕ ವೈರಾಗ್ಯದ ಸತ್ವಪರೀಕ್ಷೆಗೆ ಗುರಿಪಡಿಸಿದ್ದನು.

ಆ ಸಂದರ್ಭದಲ್ಲಿ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಧರ್ಮ ರಕ್ಷಿಸಿ ಲೋಕಕಲ್ಯಾಣ ಮಾಡುವ ಕಾರ್ಯವನ್ನು ಬಿಟ್ಟು ಮದುವೆಯನ್ನು ಮಾಡಿಕೊಂಡು ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಲೋಕೋದ್ಧಾರದ ಬದಲಾಗಿ ವಂಶೋದ್ಧಾರವನ್ನು ಮಾಡ ಬಹುದಾಗಿತ್ತು. ಆದರೆ ಮುಖಂಡರು ಹಂಚಿನಾಳಕ್ಕೆ ಕರೆದುಕೊಂಡು ಬಂದ ಆ ಮದುಮಗಳನ್ನು ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ತಾಯಿಯಂತೆಯೂ, ಅಕ್ಕ-ತಂಗಿಯರಂತೆಯೂ ಕಾಣುತ್ತಾರೆ. ಮಗನು ತಾಯಿಯ ಜೊತೆಗೆ ಮತ್ತು ಸಹೋದರನು ತನ್ನ ಅಕ್ಕ-ತಂಗಿಯರ ಜೊತೆಗೆ ವರ್ತಿಸುವ ರೀತಿಯಲ್ಲಿಯೇ ಅವರು ಆ ಸ್ತ್ರೀಯ ಜೊತೆಗೆ ವರ್ತಿಸುತ್ತಾರೆ. ಈ ರೀತಿಯ ಅವರ ವರ್ತನೆಯನ್ನು ಕಂಡ ಆ ಮದುಮಗಳು ಮದುವೆಯ ಆಶೆಯನ್ನು ಕೈಬಿಟ್ಟು ಕೆಲವೇ ದಿನಗಳಲ್ಲಿ ಮರಳಿ ತನ್ನ ತಂದೆ-ತಾಯಿಯರ ಊರಿಗೆ ಹೋಗಬೇಕಾಗುತ್ತದೆ.

ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ
ಕೇಳಿರಯ್ಯಾ—ಎರಡಾಳಿನ ಭಾಷೆಯ !
ಕೊಲುವೆನೆಂಬ ಭಾಷೆ ದೇವನದಾದರೆ,
ಗೆಲುವೆನೆಂಬ ಭಾಷೆ ಭಕ್ತನದು !!
ಸತ್ಯವೆಂಬ ಕೂರಲಗನೆ ತಳೆದುಕೊಂಡು
ಸದ್ಭಕ್ತರು ಗೆದ್ದರು ಕಾಣಾ
ಕೂಡಲ ಸಂಗಮದೇವಾ.

ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಈ ರೀತಿಯ ವರ್ತನೆಯನ್ನು ಗಮನಿಸಿದಾಗ ಅವರ ವೈರಾಗ್ಯವು ಯಾವ ತರಹದ್ದಾಗಿತ್ತು ಎಂಬುದು ನಮಗೆ ಸುಸ್ಪಷ್ಟವಾಗಿ ತಿಳಿದು ಬರುತ್ತದೆ. ಅವರ ವೈರಾಗ್ಯವು ಸತ್ವಯುತವಾಗಿತ್ತು, ಸತ್ವಹೀನವಾಗಿರಲಿಲ್ಲ. ಸತ್ವಯುತವಾದುದು ಮತ್ತು ಆಗಬಲ್ಲುದು ಮಾತ್ರ ಉಳಿಯುತ್ತದೆ, ಸತ್ವಹೀನವಾದುದು ಅಳಿಯುತ್ತದೆ. ಇದು ಜಗಜ್ಜೀವ ಸೂತ್ರ. ಇದು ಜಗತ್ತಿನ ನಿಯಮ. ಇದಕ್ಕೆ ಮೂಲ ಸೂತ್ರಧಾರನು ಶಿವನಾಗಿದ್ದರೆ ಆ ಸೂತ್ರಕ್ಕೆ ಬದ್ಧನಾಗಿರುವಾತನು ಜೀವನು. ವೈರಾಗ್ಯದ ಸತ್ವ ಪರೀಕ್ಷೆಗಾಗಿ ಶಿವನು ತಂದೊಡ್ಡಿದ ವ್ಯೂಹಗಳನ್ನೆಲ್ಲ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಬೇಧಿಸಿ ವಿಜಯಶಾಲಿಗಳಾಗಿ ಹೊರಹೊಮ್ಮಿದರು. ಈ ವ್ಯೂಹವನ್ನು ಬೇಧಿಸಲು ಅವರು ಸತ್ಯವನ್ನೇ ಬಳಸಿದರೇ ಹೊರತು ಕುಟಿಲತನವನ್ನಲ್ಲ. ಅವರದು ಕೋರಿಕೆಯ ಭಕ್ತಿಯಾಗಿತ್ತೇ ಹೊರತು ತೋರಿಕೆಯ ಭಕ್ತಿಯಾಗಿರಲಿಲ್ಲ. ಪುರಾತನ ಕಾಲದಲ್ಲಿ ಭಕ್ತವರೇಣ್ಯರನೇಕರು ಈ ರೀತಿಯಾಗಿ ಸತ್ಯವೆಂಬ ಖಡ್ಗವನ್ನು ಹಿಡಿದೇ ಯಶಸ್ವಿಗಳಾಗಿದ್ದರೆ ಎಂಬುದಾಗಿ ತಿಳಿಸುವ ಈ ಮೇಲಿನ ಬಸವಣ್ಣನವರ ವಚನಕ್ಕೆ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಜೀವಂತ ಸಾಕ್ಷಿಯಾಗಿ ನಿಂತರು. ಅವರೋರ್ವ ವೀರ ಸಂನ್ಯಾಸಿಯಾಗಿ, ವೈರಾಗ್ಯ ಮೂರ್ತಿಯಾಗಿ ಕಂಗೊಳಿಸಿದರು.

ಅಳಿಯಲಿದ್ದ ವಂಶವನ್ನು ಉಳಿಸುವುದು ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ಕರ್ತವ್ಯವಾಗಿರಲಿಲ್ಲ. ಆ ಪ್ರಶ್ನೆಯನ್ನು ಕುರಿತು ಅವರು ಚಿಂತಿಸಲೂ ಇಲ್ಲ. ತಾನು ಸೃಷ್ಟಿಸಿದ ವಂಶವನ್ನು ಉಳಿಸುವ ಅಥವಾ ಅಳಿಸುವ ಕಾರ್ಯವು ಆ ಶಿವನಿಗೇ ಸೇರಿದ ವಿಷಯವಾಗಿರುತ್ತದೆ. ಅಳಿಯಲಿದ್ದ ವಂಶದ ಉಳಿವಿನ ಹೊಣೆಯನ್ನು ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಆ ಶಿವನ ಮೇಲೆ ಹೊರಿಸಿ, ತಾವು ನಿಶ್ಚಿಂತರಾಗಿ ಕರ್ತವ್ಯ ಮಗ್ನರಾಗಿ ಶಿವಪಥದಲ್ಲಿ ಮುನ್ನುಗ್ಗಿದರು. ಭಕ್ತರು ಸದ್ಭಕ್ತರಾಗಿ ವರ್ತಿಸಿದಾಗ ಆ ಶಿವನು ದೇವರಂತೆ

ವರ್ಣಿಸಲೇ ಬೇಕಲ್ಲವೆ? ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಹಂಚಿನಾಳ ಶ್ರೀ ಹಿರೇಮಠದ ಪಟ್ಟಾಧ್ಯಕ್ಷರಾಗಿಯೇ ಮುಂದುವರಿದು ತಮ್ಮ ಜೀವನದ ಕೊನೆಯುಸಿರಿರುವವರೆಗೂ ಧರ್ಮ ರಕ್ಷಣೆಯ ತಮ್ಮ ಕರ್ತವ್ಯದಲ್ಲಿ ನಿರತರಾದರು. ಇತ್ತ ಕಡೆ ಶಿವನು ಅಳಿಯಲಿದ್ದ ವಂಶವನ್ನು ಉಳಿಸಿ,ಉದ್ಧರಿಸುವ ಕಾರ್ಯದಲ್ಲಿ ತೊಡಗಿದನು ಶಿವನಒಲುಮೆಗೆ ಪಾತ್ರರಾದ ಮಳೆಯ್ಯ-ಬಾಗವ್ವ ದಂಪತಿಗಳಿಗೆ ಕೆಲವು ವರ್ಷಗಳ ನಂತರ ವಂಶೋದ್ಧಾರಕನಾಗಿ ಒಬ್ಬನೇ ಒಬ್ಬ ಗಂಡು ಮಗು ಜನಿಸಿದನು. ಶ್ರೀಯುತ ಸಿದ್ಧಲಿಂಗಯ್ಯನವರಿಗೆ ಒಬ್ಬಳೇ ಒಬ್ಬ ಹೆಣ್ಣು ಮಗಳು ಜನಿಸಿದಳು.ಮಳೆಯ್ಯ-ಬಾಗವ್ವ ದಂಪತಿಗಳು ತಮ್ಮಏಕಮಾತ್ರ ಪುತ್ರನಿಗೆ ಆತನ ಅಜ್ಜ ಚರಂತಯ್ಯನ ಹೆಸರನ್ನೇ ಇಟ್ಟರು. ಶ್ರೀಯುತ ಸಿದ್ಧಲಿಂಗಯ್ಯನವರು ತಮ್ಮ ಏಕಮಾತ್ರ ಪುತ್ರಿಗೆ ಗಂಗವ್ವ ಎಂಬ ಹೆಸರಿಟ್ಟರು.

ನೀನೊಲಿದರೆ ಕೊರಡು ಕೊನರುವುದಯ್ಯ !
ನೀನೊಲಿದರೆ ಬರಡು ಹಯನಹುದಯ್ಯ !
ನೀ ನೊ ಲಿ ದ ರೆ ವಿಷವಮೃತವಹುದಯ್ಯ !
ನೀನೊಲಿದರೆ ಸಕಲ-ಪಡಿ-ಪದಾರ್ಥ ಇದಿರಲ್ಲಿಪ್ಪವು !
ಕೂಡಲಸಂಗಮದೇವ.

ಶಿವನೊಲಿದರೆ ಅಸಾಧ್ಯವೆನಿಸಿದ ಕಾರ್ಯಗಳೂ ಸಹಿತ ಕೈಗೂಡುತ್ತವೆ. ಕೊರಡು ಕೊನರುವ, ಬರಡು ಹಯನಾಗುವ, ವಿಷವು ಅಮೃತವಾಗುವ ಪ್ರಕೃತಿ-ವಿರುದ್ಧ ಮತ್ತು ಲೋಕವಿರುದ್ಧ ಪರಿವರ್ತನೆಯ ಕ್ರಿಯೆಗಳೂ ಸಹಿತ ಶಿವನ ಒಲುಮೆಯಿಂದ ಪವಾಡಗಳಂತೆ ಕ್ಷಣಾರ್ಧದಲ್ಲಿ ಜರುಗಿ ಹೋಗುತ್ತವೆ. ಜರುಗುವ ಕಾಲ ಬಂದಾಗ ವಿರೋಧ ವಿಘ್ನಗಳೆಲ್ಲ ಅರಗಿನಂತೆ ಕರಗಿ ಹೋಗಿ, ನಮ್ಮ ಕಾರ್ಯಗಳು ಮೆರಗಾಗುವವು. ಇದೆಲ್ಲಕ್ಕೂ ಬೇಕಾದುದು ದೇವರ ಒಲುಮೆ ಎಂಬುದು ಸುಸ್ಪಷ್ಟ. ಆ ಶಿವನ ಒಲುಮೆಯನ್ನು ಆಕರ್ಷಿಸುವುದಕ್ಕೆ ನಮ್ಮಲ್ಲಿ ಇರಬೇಕಾದುದು ನಿಸ್ವಾರ್ಥದಿಂದ ಕೂಡಿದ ನಿಷ್ಕಾಮ ಭಕ್ತಿ.

## ಪವಾಡ ಪುರುಷ

ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ವೈರಾಗ್ಯದ ಸತ್ವಪರೀಕ್ಷೆಯನ್ನು ಮಾಡುವ ಘಟನೆಯೊಂದು ಅವರ ಜೀವನದಲ್ಲಿ

ಜರುಗಿದ ನಂತರ ಅವರಲ್ಲಿ ಮಹಾ ಪರಿವರ್ತನೆಯೊಂದು ಉಂಟಾಗಿರುವುದನ್ನು ನಾವು ಗುರುತಿಸಬಹುದಾಗಿದೆ. ಆ ಘಟನೆಯು ಜರುಗಿದ ನಂತರ ಜನರು ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳನ್ನು "ಪವಾಡ ಪುರುಷ" ಎಂಬುದಾಗಿ ಕರೆಯಲಾರಂಭಿಸುತ್ತಾರೆ. ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಲ್ಲಿ ಕರ್ತವ್ಯ ಪ್ರಜ್ಞೆಯು ಇನ್ನಷ್ಟು ಹೆಚ್ಚುತ್ತದೆ. ಅವರು ತಮ್ಮ ಪ್ರಾಣಲಿಂಗದಲ್ಲಿ ಬೆರೆತು ಅಂತರ್ಮುಖಿಗಳಾಗುತ್ತಾರೆ. ಅವರು ಹೆಚ್ಚು ಗಂಭೀರ ಸ್ವರೂಪಿಗಳಾಗುತ್ತಾರೆ. ಅವರ ಆಧ್ಯಾತ್ಮಿಕ ಗಾಂಭೀರ್ಯವನ್ನು ಅರಿತುಕೊಳ್ಳಲು ಅಸಮರ್ಥರಾದ ಕೆಲವು ಅಲ್ಪಮತಿಗಳು ಅವರಿಗೆ ಹುಚ್ಚು ಹಿಡಿದಿರಬಹುದೆಂದು ಭಾವಿಸುತ್ತಾರೆ. ಆದರೆ ಅವರಲ್ಲಿಯ ಕರ್ತವ್ಯ ಪ್ರಜ್ಞೆ, ಮತ್ತು ಸಮಯ ನಿಷ್ಠೆ ಇವುಗಳು ಹೆಚ್ಚುತ್ತಾ ಹೋಗುತ್ತವೆ. ನಿಸರ್ಗ ನಿಯಮದೊಂದಿಗಿನ ಅವರ ಹೊಂದಾಣಿಕೆಯು ಬೆಳೆಯುತ್ತಾ ಬರುತ್ತದೆ. ದಿನದ ಇಪ್ಪತ್ತನಾಲ್ಕು ತಾಸುಗಳಲ್ಲಿಯೂ ಅವರಿಂದ ಲಿಂಗಪೂಜೆಯು ನಡೆಯುತ್ತದೆ. ಅವರ ನುಡಿಗಳು ಲಿಂಗ ನುಡಿಗಳಾಗಿ ಪರಿಣಮಿಸಿದವು. ಅವರ ನಡೆಯು ಲಿಂಗ ನಡೆಯಾಗಿ ತನ್ನ ಪರಿಣಾಮವನ್ನು ಬೀರತೊಡಗಿತು. ಅವರ ಈ ರೀತಿಯ ನಡೆನುಡಿಗಳು ಜನಸಾಮಾನ್ಯರಿಗೆ ಪವಾಡಗಳಂತೆ ಕಂಡು ಬಂದುದರಲ್ಲಿ ಆಶ್ಚರ್ಯವೇನೂ ಇಲ್ಲ. ಮುಂದೆ ಜರುಗಬಹುದಾದ ನೈಸರ್ಗಿಕ ಕ್ರಿಯೆಗಳ ಮುನ್ಸೂಚನೆಯು ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳ ನಡೆ ನುಡಿಗಳಿಂದ ವ್ಯಕ್ತವಾಗುತ್ತಿದ್ದವೆಂಬುದಾಗಿ ಜನಪದ ಭಾಷೆಯಲ್ಲಿ ಲಭ್ಯವಿರುವ ಅವರ ಪವಾಡಗಳು ಹೇಳುತ್ತವೆ. ಅವರ ನಡೆ–ನುಡಿಗಳ ಅಂತಿಮ ಪರಿಣಾಮವು ಧರ್ಮವನ್ನು ರಕ್ಷಿಸುವುದೇ ಆಗಿತ್ತು, ಏಕೆಂದರೆ ಶಿವನ ಇಚ್ಛೆಯೂ ಸಹ ಧರ್ಮವನ್ನು ರಕ್ಷಿಸಬೇಕೆಂಬುದೇ ಆಗಿರುತ್ತದೆ ಅಲ್ಲವೆ ?

## ಸಾಹಿತ್ಯ ರಚನೆ

ಜನರು ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳನ್ನು ಓರ್ವ ಪವಾಡ ಪುರುಷ ಎಂಬುದಾಗಿಯೇ ತಿಳಿದುಕೊಂಡು ಬಿಡುತ್ತಾರೆ. ಆದರೆ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾ

ಚಾರ್ಯ ಸ್ವಾಮಿಗಳ ನಡೆ ನುಡಿಗಳು ಬಹಳಷ್ಟು ಸರಳವಾಗಿರುತ್ತವೆ. ಶ್ರೀ ಗುರುವಿನ ಸಮಾಧಿಗೆ ಹೋಗಿ ಗುರುಪೂಜೆ ಮಾಡುವುದು, ಊರಿನಲ್ಲಿ ತಿರುಗಿ ಹಿಟ್ಟಿನ ಭಿಕ್ಷೆ ಮಾಡುವುದು, ಉಳಿದ ಸಮಯದಲ್ಲಿ ಬರೆಯುತ್ತಾ ಕುಳಿತುಬಿಡುವುದು ಮತ್ತು ಸಾಯಂಕಾಲ ಯಾರನ್ನಾದರೂ ಕರೆದು ಪತ್ರಿ ಗಿಡಕ್ಕೆ ನೀರು ಹಾಕಿಸುವುದು ಅವರ ನಿತ್ಯದ ಚಟುವಟಿಕೆಗಳಾಗಿದ್ದವು. ದಿನದಲ್ಲಿಯ ಹೆಚ್ಚು ಸಮಯವನ್ನು ಶ್ರೀಗುರು ಪಡದಯ್ಯ(ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಬರವಣಿಗೆಯಲ್ಲಿಯೇ ಕಳೆಯುತ್ತಿದ್ದರು ಎಂಬುದು ತಿಳಿದು ಬರುತ್ತದೆ.

ಈ ಮೊದಲೇ ತಿಳಿಸಿರುವಂತೆ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಸ್ವತಃ ತಾವೇ ಬರೆದಿಟ್ಟಿದ್ದ ಅಪಾರವಾದ ಧಾರ್ಮಿಕ ಸಾಹಿತ್ಯವು ತೀರಾ ಇತ್ತೀಚಿನ ದಿನಗಳಲ್ಲಿ ಕಸದ ಪಾಲಾಗಿ ಹೋಗಿದೆ ಎಂಬುದು ಬಲು ದುರ್ದೈವದ ಸಂಗತಿಯಾಗಿದೆ.

## ರುದ್ರಭೂಮಿಯಲ್ಲಿ ನೆಲೆಸಿರುವ ಶಿವಾಚಾರ್ಯರು

ವೈರಾಗ್ಯಮೂರ್ತಿ ಶ್ರೀ ಷ ಬ್ರ. ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ಸುಮಾರು ಕ್ರಿ.ಶ. ೧೯೪೬ರಲ್ಲಿ ಶಿವಸಾಯುಜ್ಯ ಹೊಂದಿದರು ಅವರ ಇಚ್ಛೆಯ ಪ್ರಕಾರವೇ ಅವರ ಮೃತದೇಹವನ್ನು ಹಂಚಿನಾಳ ಗ್ರಾಮದ ಹೊರವಲಯದಲ್ಲಿದ್ದ ಸಾರ್ವಜನಿಕ ರುದ್ರಭೂಮಿಯಲ್ಲಿ, ಅವರ ಗುರುಗಳ ಸಮಾಧಿಯ ಪಕ್ಕದಲ್ಲಿಯೇ ಹೂತಿರುವರು. ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳು ತಮ್ಮ ತರುವಾಯ ಹಂಚಿನಾಳ ಶ್ರೀ ಹಿರೇಮಠಕ್ಕೆ ಯಾವುದೇ ಮರಿಯನ್ನು (ಉತ್ತರಾಧಿಕಾರಿಯನ್ನು) ಬಿಟ್ಟುಕೊಂಡಿಲ್ಲವಾದ್ದರಿಂದ ಶ್ರೀ ಹಿರೇಮಠದಲ್ಲಿ ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದ ಗುರುಪರಂಪರೆಯ ಕುರುಹನ್ನು ಉಳಿಸುವುದಕ್ಕಾಗಿ ಕೇವಲ ಅವರ ಸಮಾಧಿಯ ಮೇಲೆ ಮಾತ್ರ ಒಂದು ಗದ್ದಿಗೆಯನ್ನು ಪ್ರತಿಷ್ಠಾಪಿಸಿದ್ದರು. ಆಗ ಅವರ ಗುರುಗಳ ಸಮಾಧಿಯ ಮೇಲೆ ಗದ್ದಿಗೆ ಇರಲಿಲ್ಲ. ಅದರ ಮೇಲೆ ಗುರ್ತಿಗಾಗಿ ಇರಿಸಿದ ಒಂದು ಸಣ್ಣ ಕಲ್ಲು ಇತ್ತು. ಅದನ್ನೇ ಶ್ರೀಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ

ಸ್ವಾಮಿಗಳು ನಿತ್ಯವೂ ಪೂಜಿಸುತ್ತಿದ್ದರಂತೆ. ಈಗ ಸುಮಾರು ಹತ್ತು ಹನ್ನೆರಡು ವರ್ಷಗಳ ಹಿಂದೆ (ಸುಮಾರು ಕ್ರಿ.ಶ ೧೯೭೭-೭೮ರಲ್ಲಿ) ಅವರ ಗುರುಗಳ ಸಮಾಧಿಯ ಮೇಲೂ ಒಂದು ಗದ್ದಿಗೆಯನ್ನು ಪ್ರತಿಷ್ಠಾಪಿಸಿ ಆ ಎರಡೂ ಗದ್ದಿಗೆಗಳನ್ನು ಒಳಗೊಳ್ಳುವಂತೆ ಒಂದು ಸುಂದರವಾದ ಮಂದಿರವನ್ನು ಕಟ್ಟಲಾಗಿದೆ. ಈ ಗುರುಮಂದಿರವನ್ನು ನಿರ್ಮಿಸಿದಾಗ ಅದರಲ್ಲಿ ಈ ಎರಡೂ ಹೊಸ ಗದ್ದಿಗೆಗಳನ್ನು ಪ್ರತಿಷ್ಠಾಪಿಸುವ ಕಾರ್ಯವು ಹೂಲಿ ಗ್ರಾಮದ ಶ್ರೀ ಸಂಬಯ್ಯನಮಠದ ಶ್ರೀ ಷ.ಬ್ರ. ಉಮೇಶ್ವರ ಶಿವಾಚಾರ್ಯ ಸ್ವಾಮಿಗಳ ದಿವ್ಯ ಸನ್ನಿಧಿಯಲ್ಲಿ ಅವರ ಅಪ್ಪಣೆಯ ಪ್ರಕಾರ ನಡೆಯಿತು.

ಮುಂದೆ ಕೆಲವು ವರ್ಷಗಳ ನಂತರ (ಕ್ರಿ.ಶ. ೧೯೮೬ರಲ್ಲಿ) ಮೊದಲು ಅಲ್ಲಿದ್ದ ಸಾರ್ವಜನಿಕ ರುದ್ರಭೂಮಿಯು ಬೇರೊಂದು ಸ್ಥಳಕ್ಕೆ ಸ್ಥಳಾಂತರಿಸಲ್ಪಟ್ಟಿತು. ರುದ್ರಭೂಮಿಯನ್ನು ಬೇರೊಂದು ಸ್ಥಳಕ್ಕೆ ಸ್ಥಳಾಂತರಿಸುವ ಕಾರ್ಯವು ತೊರಗಲ್ಲ ಗ್ರಾಮದ ಗಚ್ಚಿನ ಹಿರೇಮಠದ ಶ್ರೀ ಮ. ಘ. ಚ. ಚನ್ನಮಲ್ಲ ಶಿವಾಚಾರ್ಯ ಸ್ವಾಮಿಗಳ ದಿವ್ಯ ಸನ್ನಿಧಿಯಲ್ಲಿ ಜರುಗಿತು. ಮೊದಲು ಊರಿನ ಹೊರವಲಯದಲ್ಲಿ ಇದ್ದ ಈ ಗುರುಮಂದಿರದ ಸುತ್ತಲೂ ಈಗ ಊರು ಬೆಳೆದು ಬಿಟ್ಟಿದೆ. ಹಂಚಿನಾಳ ಗ್ರಾಮದ ದಕ್ಷಿಣಕ್ಕೆ ನವಿಲುಗುಂದ ರಸ್ತೆಗೆ ಹೊಂದಿಕೊಂಡು ಇರುವ ರುದ್ರಭೂಮಿಯ ನೈರುತ್ಯ ಮೂಲೆಯಲ್ಲಿ ಪೂರ್ವಾಭಿಮುಖವಾಗಿರುವ ಒಂದು ಮಂದಿರವು ಇರುತ್ತದೆ. "ಸತ್ಯಂ ಶಿವಂ ಸುಂದರಂ" ಎಂಬ ವಾಕ್ಯದಿಂದ ಶೋಭಿಸುತ್ತಿರುವ ಈ ಮಂದಿರವೇ ಇಲ್ಲಿಯ ಶ್ರೀ ಹಿರೇಮಠದ ಗುರುಪರಂಪರೆಯಲ್ಲಿ ಆಗಿ ಹೋಗಿರುವ ಕೊನೆಯ ಇಬ್ಬರು ಪಟ್ಟಾಧ್ಯಕ್ಷರುಗಳ ಗದ್ದಿಗೆಗಳನ್ನು ಒಳಗೊಂಡಿದೆ. ಇದನ್ನೇ ಗ್ರಾಮಸ್ಥರು ಸಾಮಾನ್ಯವಾಗಿ "ಪಡದಪ್ಪಜ್ಜನ ಗದ್ದಿಗೆ" ಎಂಬುದಾಗಿ ಕರೆಯುತ್ತಾರೆ. ಈ ಪಡದಪ್ಪಜ್ಜನ ಗದ್ದಿಗೆಯು ಜಾಗೃತ ಸ್ಥಾನವಾಗಿರುವುದು. ಶಿವಾಚಾರ್ಯರು ನೆಲೆನಿಂತಿರುವ ಈ ಕ್ಷೇತ್ರವು "ಜಂಗಮಲಿಂಗ ಕ್ಷೇತ್ರ" ಎನಿಸಿಕೊಳ್ಳುತ್ತದೆ.

"ಪಿಂಡ ಬ್ರಹ್ಮಾಂಡಯೋರೈಕ್ಯಂ" ಎಂದು ಹೇಳುವರು. ಅಂದರೆ ಬ್ರಹ್ಮಾಂಡದಲ್ಲಿ ವ್ಯಕ್ತವಾಗಿರುವ ಮೂಲ ಘಟಕಗಳು ಅಥವಾ ಮೂಲಭೂತ ತತ್ತ್ವಗಳು ಪಿಂಡಾಂಡದಲ್ಲಿಯೂ ಇವೆ ಎಂಬುದು ಇದರ ಅರ್ಥ. ಈ ಕಾರಣ

ದಿಂದಾಗಿಯೇ ಶಿವಯೋಗಿಗಳು ಹೊರನೋಟಕ್ಕೆ ಕಾಣುವ ಬ್ರಹ್ಮಾಂಡವನ್ನು ಅರಿತುಕೊಳ್ಳಲು ಹಂಬಲಿಸದೆ ಅಂತರ್ಮುಖಿಗಳಾಗಿ ಪಿಂಡಾಂಡದಲ್ಲಿ (ಶರೀರದಲ್ಲಿ) ಪ್ರವೇಶ ಮಾಡಿ "ಪ್ರಾಣಲಿಂಗಿ" ಗಳಾಗುತ್ತಾರೆ. ಅಲ್ಲಿ ತಾವು ಕಂಡ ಅದ್ಭುತ ಶಕ್ತಿ-ತತ್ತ್ವಗಳಿಂದ ಇಡೀ ಬ್ರಹ್ಮಾಂಡದ ನೆಲೆಯನ್ನು ಕಂಡು ಕೊಳ್ಳುವರು. ಇದೇ ರೀತಿಯಾಗಿ "ಶರೀರಮಾದ್ಯಂ ಖಲು ಧರ್ಮ ಸಾಧನಂ" ಎಂಬುದಾಗಿ ಹೇಳುವರು. ಅಂದರೆ, ಯೋಗಸಾಧನೆಗೆ ಶರೀರವನ್ನು ಬಿಟ್ಟರೆ ಇನ್ನಾವ ಶ್ರೇಷ್ಠವಾದ ಉಪಕರಣವೂ ಇಲ್ಲ ಎಂಬುದು ಇದರ ಅರ್ಥ. ಈ ಮಾತಿನಲ್ಲಿ, ಶರೀರದಲ್ಲಿ ಯೋಗಸಾಧನೆ ಮಾಡುವುದರ ಮೂಲಕವಾಗಿ ಪರಶಿವಬ್ರಹ್ಮನ ನಿಲುವನ್ನು ಕಾಣಬೇಕೆಂಬ ರಹಸ್ಯವು ಅಡಗಿದೆ. ಇದುವೇ ಶಿವಯೋಗದ ರಹಸ್ಯವಾಗಿರುವುದು. ಇದುವೇ ಶಿವಾಚಾರ್ಯರ ಸಾಧನಾ ಮಾರ್ಗವಾಗಿರುವುದು. ಶಿವಯೋಗ ಸಾಧಕರಾಗಿ ತಮ್ಮ ಆಧ್ಯಾತ್ಮಿಕ ಜೀವನವನ್ನು ಪ್ರಾರಂಭಿಸುವ ಶಿವಾಚಾರ್ಯರು ಷಟ್‌ಸ್ಥಲಮಾರ್ಗದಲ್ಲಿ ಕ್ರಮಿಸುತ್ತ ಭಕ್ತರಾಗಿ, ಮಹೇಶ್ವರರಾಗಿ, ಪ್ರಸಾದಿಗಳಾಗಿ ನಂತರ ಪ್ರಾಣ ಲಿಂಗಿ ಸ್ಥಲ ತಲುಪಿ ಅಂತರ್ಮುಖಿಗಳಾಗುತ್ತಾರೆ. ನಿತ್ಯವೂ ಪ್ರಾಣಲಿಂಗ ಪೂಜೆಯಲ್ಲಿ ತೊಡಗಿದ ಅವರು ಬಹಿರಂಗದಲ್ಲಿ ಶರಣನ ಲಕ್ಷಣಗಳನ್ನು ಹೊರ ಸೂಸುತ್ತಾರೆ. ಸ್ವಸ್ವರೂಪ ಜ್ಞಾನ ಸಂಪಾದಿಸಿದ ಅವರು "ತನ್ನೊಳಗೇಕೋ ಭಾವನೆಯೊಡಗೂಡಿ" ಐಕ್ಯ ಸ್ಥಲವನ್ನು ಸಿದ್ಧಿಸಿಕೊಳ್ಳುತ್ತಾರೆ. ಈ ಪ್ರಕಾರ ವಾಗಿ ಶಿವಾಚಾರ್ಯರು ಕೈಕೊಂಡ ಶಿವಯೋಗ ಸಾಧನೆಯುಲ್ಲವೂ ಅವರ ಶರೀರದಲ್ಲಿ ವ್ಯಕ್ತವಾಗುತ್ತದೆ. ಅಂಗಗುಣಗಳನ್ನು ಅಳಿದ ಅವರ ಶರೀರವು ಲಿಂಗ ಗುಣಗಳನ್ನು ಸಂಪಾದಿಸಿರುತ್ತದೆ. ಅವರ ಶರೀರವು ಮಾಂಸ ಪಿಂಡವಾಗಿ ಉಳಿಯದೇ ಶಿವಯೋಗ ಸಾಧನೆಯಿಂದಾಗಿ ಮಂತ್ರಪಿಂಡವಾಗಿ ಪರಿವರ್ತನೆ ಗೊಂಡಿರುತ್ತದೆ. ಈ ಕಾರಣದಿಂದಾಗಿಯೇ ಶಿವಾಚಾರ್ಯರ ಶರೀರವು ಪವಿತ್ರತೆಯನ್ನು ಮತ್ತು ಅಪಾರವಾದ ಶಕ್ತಿಯನ್ನು ಸಂಪಾದಿಸುತ್ತದೆ. ಶಿವಯೋಗಿಗಳು ಲಿಂಗೈಕ್ಯರಾದ ನಂತರ ಅವರ ಪಾರ್ಥಿವ ಶರೀರವೂ ಸಹಿತ ಬಹಳಷ್ಟು ಕಾಲದವರೆಗೆ ತನ್ನ ಪ್ರಭಾವವನ್ನು ಬೀರುತ್ತಲೇ ಇರುತ್ತದೆ.

ಶಿವಾಚಾರ್ಯರ ಗದ್ದಿಗೆಯ ದರ್ಶನದಿಂದ ನಮ್ಮಲ್ಲಿಯ ಶಿವಭಕ್ತಿಯು ಹೆಚ್ಚು ದೃಢಗೊಳ್ಳುತ್ತದೆ. ಅಜ್ಞಾನದ ಪ್ರಭಾವದಿಂದಾಗಿ ಮನಸ್ಸನ್ನು

ಆವರಿಸಿರುವ ಭಯವು ನಿವಾರಣೆಯಾಗುತ್ತದೆ. ಧರ್ಮದ ಮಾರ್ಗದಲ್ಲಿ ನಡೆಯಬೇಕೆಂಬ ನಮ್ಮ ಸಂಕಲ್ಪವು ದೃಢಗೊಳ್ಳುತ್ತದೆ. ಎಂಥ ಕಠಿಣ ಪರಿಸ್ಥಿತಿಯುಂಟಾದರೂ ಸಹಿತ ಧರ್ಮ ಮಾರ್ಗದಲ್ಲಿ ನಡೆಯಬೇಕು ಮತ್ತು ಧರ್ಮಮಾರ್ಗದಲ್ಲಿ ನಡೆಯುವವರನ್ನು ಆ ಧರ್ಮವೇ ರಕ್ಷಿಸುತ್ತದೆ ಎಂಬುದಕ್ಕೆ ಲಿಂಗೈಕ್ಯ ಶ್ರೀಗುರು ಷಡದಪ್ಪಜ್ಜನವರ ಜೀವನವೇ ಸಾಕ್ಷಿಯಾಗಿರುವುದು. ನಮ್ಮನಮ್ಮಕರ್ತವ್ಯಗಳಲ್ಲಿ ಮಗ್ನರಾಗಿ ಸದಾಕಾಲವೂ ಧರ್ಮಮಾರ್ಗದಲ್ಲಿಯೇ ಕ್ರಮಿಸಬೇಕು ಎಂಬ ಪ್ರೇರಣೆಯು ಶ್ರೀ ಗುರುವಿನ ಗದ್ದಿಗೆಯ ದರ್ಶನ ಮಾತ್ರದಿಂದಲೇ ನಮಗೆ ದೊರೆಯುತ್ತದೆ. ಈ ರೀತಿಯಾಗಿ ಗದ್ದಿಗೆಯ ದರ್ಶನವು ಸದ್ಭಕ್ತರ ಮೇಲೆ ಅಪಾರವಾದ ಪ್ರಭಾವವನ್ನು ಬೀರುತ್ತದೆ. ಸದ್ಭಕ್ತರನ್ನು ರಕ್ಷಿಸಲು ಸದಾಕಾಲವೂ ಸನ್ನದ್ಧರಾಗಿರುವ ಶ್ರೀ ಗುರುಗಳು ತಮ್ಮತ್ತ ಎಲ್ಲರನ್ನೂ ಆಕರ್ಷಿಸುವರು. ಯಾವುದೇ ಭೇಧ ಭಾವಗಳನ್ನೂ ಲೆಕ್ಕಿಸದೇ ಎಲ್ಲ ಧರ್ಮಗಳ ಜನರೂ ಇಲ್ಲಿಗೆ ಆಗಮಿಸಿ ಶ್ರೀ ಗುರುವಿನ ಗದ್ದಿಗೆಯ ದರ್ಶನ ಪಡೆಯುತ್ತಾರೆ. ಸುಗ್ಗಿಯ ಕಾಲದಲ್ಲಿ ಕಾಳಿನ ರಾಶಿ ಮಾಡಿದಾಗ ಒಂದು ಮುಷ್ಟಿ ಕಾಳನ್ನು ಮತ್ತು ಮನೆಯಲ್ಲಿ ಎಮ್ಮೆ ಅಥವಾ ಆಕಳುಗಳು ಈದಾಗ ಒಂದು ಕಪ್ಪು ಗಿಣ್ಣದ ಹಾಲನ್ನು ಶ್ರೀ ಗುರುವಿನ ಗದ್ದಿಗೆಯ ಮುಂದೆ ಸುರಿದು ಶ್ರೀ ಗುರುವಿಗೆ ನೈವೇದ್ಯ ಮಾಡಿ ತಮಗೆ ದೊರೆತಿರುವ ಫಲವು "ಶ್ರೀಗುರುವಿನ ಪ್ರಸಾದ" ಎಂಬ ಭಾವನೆಯನ್ನು ವ್ಯಕ್ತಪಡಿಸುವ ಸದ್ಭಕ್ತರು "ಪ್ರಸಾದಿ" ಗಳಾಗಿ ವರ್ತಿಸುತ್ತಾರೆ. ಮೊದಲ ಬಾರಿಗೆ ಗಂಡನ ಮನೆಗೆ ಹೋಗುತ್ತಿರುವ ಹೆಣ್ಣುಮಕ್ಕಳು ಗದ್ದಿಗೆಯ ದರ್ಶನ ಮಾಡಿಕೊಂಡು ತಮ್ಮ ಮುಂದಿನ ದಾಂಪತ್ಯ ಜೀವನವನ್ನು ಸಮರ್ಥವಾಗಿ ಎದುರಿಸಲು ಅವಶ್ಯವಿರುವ ಆತ್ಮ ಬಲವನ್ನು ಕರುಣಿಸುವಂತೆ ಶ್ರೀ ಗುರುವಿನಲ್ಲಿ ಪ್ರಾರ್ಥಿಸಿಕೊಳ್ಳುತ್ತಾರೆ. ಗುರುವಿನ ಶ್ರೀ ರಕ್ಷೆಯನ್ನು ಪಡೆದು ತಮ್ಮ ಹೊಸ ಜೀವನದಲ್ಲಿ ಕಾಲಿರಿಸುತ್ತಾರೆ. ತಾವು ಹೊಸ ವಾಹನವನ್ನು ಖರೀದಿಸಿದಾಗ ಅದರಿಂದ ತಮಗೆ ಯಾವುದೇ ಕೆಡಕುಂಟಾಗದೇ ಇರಲಿ ಎಂಬ ಪ್ರಾರ್ಥನೆಯನ್ನು ಮುಂದಿಟ್ಟುಕೊಂಡು ಸದ್ಭಕ್ತರು ಶ್ರೀ ಗುರುವಿನ ಗದ್ದಿಗೆಯನ್ನು ಪೂಜಿಸುತ್ತಾರೆ. ನಿತ್ಯವೂ ದರ್ಶನ ಪಡೆಯುವುದಾಗದಿದ್ದರೂ ಪ್ರತಿ ಸೋಮವಾರಕ್ಕೊಂದು ಸಲವಾದರೂ ಶ್ರೀ ಗುರುವಿನ ಗದ್ದಿಗೆಯ ದರ್ಶನ ಪಡೆಯಬೇಕೆಂದು ಸದ್ಭಕ್ತರು ಬಯಸು

ತ್ತಾರೆ. ಗದ್ದಿಗೆಯ ದರ್ಶನದಿಂದ ತಮ್ಮ ಆತ್ಮ ಬಲವನ್ನು ಹೆಚ್ಚಿಸಿಕೊಂಡು ನಿತ್ಯದ ಜೀವನದಲ್ಲಿ ಶಾಂತಿ ಸಮಾಧಾನಗಳನ್ನು ರೂಢಿಸಿಕೊಂಡು, ತೃಪ್ತಿಯ ಜೀವನವನ್ನು ನಡೆಸಲು ಹವಣಿಸುತ್ತಾರೆ. ಈ ರೀತಿಯಾಗಿ ನಡೆದು ಬರುತ್ತಿರುವ ಶ್ರೀ ಗುರುವಿನ ಮತ್ತು ಸದ್ಭಕ್ತರ ನಡುವಿನ ಸಂಬಂಧವು ಶ್ರೀ ಮುಪ್ಪಿನ ಷಡಕ್ಷರಿಗಳಿಂದ ರಚಿಸಲ್ಪಟ್ಟಿರುವ ಪದ್ಯವೊಂದರ ಈ ಕೆಳಗಿನ ಸಾಲುಗಳನ್ನು ನೆನಪಿಗೆ ತರುತ್ತದೆ.

ಅವರವರ ದರುಶನಕೆ, ಅವರವರ ವೇಷದಲಿ,
ಅವರವರಿಗೆಲ್ಲ ಗುರು ನೀನೊಬ್ಬನೇ ।
ಅವರವರ ಭಾವಕ್ಕೆ, ಅವರವ ಪೂಜೆಗಂ,
ಅವರವರಿಗೆಲ್ಲ ದೇವ ನೀನೊಬ್ಬನೇ ।।

ಈ ರೀತಿಯಾಗಿ ರುದ್ರಭೂಮಿಯಲ್ಲಿ ನೆಲೆಸಿರುವ ಶಿವನೋಪಾದಿಯಲ್ಲಿ, ಸದ್ಭಕ್ತರಿಗೆ ಶಿವಪಥವನ್ನು ತೋರುವ "ಅಕಳಂಕ ಗುರು" ವಾಗಿರುವ ಶ್ರೀಗುರು ಪಡದಪ್ಪಜ್ಜನವರ ಗದ್ದಿಗೆಯ ದರ್ಶನವನ್ನು ಸದ್ಭಕ್ತರು ಅಮವಾಸ್ಯೆಯ ದಿವಸ ತಪ್ಪದೇ ಪಡೆದುಕೊಳ್ಳುತ್ತಾರೆ. ಅಮವಾಸ್ಯೆಯ ದಿನದಂದು ಪಡೆದುಕೊಳ್ಳುವ ಗದ್ದಿಗೆಯ ದರ್ಶನವು ವಿಶೇಷವಾದ ಲಾಭವನ್ನು ನೀಡುತ್ತದೆ. ಅಮವಾಸ್ಯೆಯ ದಿವಸ ಎಲ್ಲೆಡೆಯೂ ಆವರಿಸುವ ಕಗ್ಗತ್ತಲೆಯೋಪಾದಿಯಲ್ಲಿ ತನ್ನ ಜೀವನದಲ್ಲಿ ಆವರಿಸಿರುವ ಅಜ್ಞಾನಾಂಧಕಾರವನ್ನು ದೂರಮಾಡಿ ಬೆಳಕನ್ನು ಕರುಣಿಸು ಎಂಬುದಾಗಿ ಬೇಡಿಕೊಳ್ಳುವ ಸದ್ಭಕ್ತನು ಅಮವಾಸ್ಯೆಯ ದಿವಸ ಶ್ರೀಗುರುವಿನ ಗದ್ದಿಗೆಯ ದರ್ಶನ ಪಡೆಯುತ್ತಾನೆ. ಅಮುವಾಸ್ಯೆಯ ನಂತರದ ದಿನಗಳಲ್ಲಿ ಕಾಣಿಸಿಕೊಳ್ಳುವ ಬಿದಿಗೆಯ ಚಂದ್ರನೋಪಾದಿಯಲ್ಲಿ ಶ್ರೀ ಗುರುವು ತನ್ನ ಜೀವನದಲ್ಲಿ ಬೆಳಕನ್ನುಂಟು ಮಾಡುತ್ತಾನೆ ಎಂಬುದೇ ಸದ್ಭಕ್ತನ ಅಚಲವಾದ ನಂಬಿಕೆಯಾಗಿರುತ್ತದೆ. ಈ ರೀತಿಯಾಗಿ ಶ್ರೀಗುರುಗಳು ನಿಷ್ಠೆಯಿಂದ ನಡೆದುಕೊಂಡ ಸದ್ಭಕ್ತರ ಸಕಲ ಇಷ್ಟಾರ್ಥಗಳನ್ನು ಪೂರೈಸುತ್ತಿದ್ದಾರೆ.

ಪ್ರತಿವರ್ಷ ಶ್ರಾವಣ ಮಾಸದಲ್ಲಿ ಇಲ್ಲಿ ಶ್ರೀ ಗುರುಗಳ ಗದ್ದಿಗೆಗಳಿಗೆ ವಿಶೇಷವಾದ ಪೂಜೆಯು ಸಲ್ಲುತ್ತದೆ. ಶ್ರಾವಣ ಮಾಸದಲ್ಲಿ ಪ್ರತಿದಿನವೂ ರುದ್ರಮಂತ್ರ ಪಠಣದೊಂದಿಗೆ ಶ್ರೀ ಗುರುಗಳ ಗದ್ದಿಗೆಗಳಿಗೆ ಅಭಿಷೇಕವು

ಜರುಗುತ್ತದೆ. ಶ್ರಾವಣ ಮಾಸದ ಕೊನೆಯ ಸೋಮವಾರ ದಿವಸ ನಡೆಯುವ "ಪಡದಪ್ಪಜ್ಜನ ಜಾತ್ರೆ"ಯಲ್ಲಿ ಎಲ್ಲ ಸದ್ಭಕ್ತರು ಹರ್ಷೋಲ್ಲಾಸಗಳಿಂದ ಪಾಲ್ಗೊಳ್ಳುತ್ತಾರೆ. ಶ್ರೀ ಗುರುವಿನ ಎಲ್ಲ ಸದ್ಭಕ್ತರ ಸಾಮೂಹಿಕ ಪ್ರಯತ್ನ ದಿಂದ ನಡೆಯುವ ಈ ಜಾತ್ರೆಯಲ್ಲಿ ಹಿಂದಿನ ದಿನ ರಾತ್ರಿಯಿಡೀ ಜಾಗರಣೆ ನಡೆಯುತ್ತದೆ. ಸೋಮವಾರ ದಿವಸ ಮುಂಜಾನೆ ಮಹಾರುದ್ರಾಭಿಷೇಕ, ಮಧ್ಯಾಹ್ನ ಅನ್ನದಾಸೋಹ ಮತ್ತು ಸಾಯಂಕಾಲ ''ಪಲ್ಲಕ್ಕಿ ಉತ್ಸವ''ಗಳು ನಡೆಯುತ್ತವೆ. ವಿಶೇಷವಾದ ರೀತಿಯಲ್ಲಿ ಶೃಂಗರಿಸಿದ ಪಲ್ಲಕ್ಕಿಯಲ್ಲಿ ಶ್ರೀಗುರುವಿನ ಗದ್ದಿಗೆಯ ಭಾವಚಿತ್ರವನ್ನು ಇರಿಸಿಕೊಂಡು, ಮಂಗಲವಾದ್ಯಗಳು ಮತ್ತು ಭಜನಾ ಮೇಳಗಳೊಂದಿಗೆ ಊರಿನ ಪ್ರಮುಖ ಬೀದಿಗಳಲ್ಲಿ ಹಾಯ್ದು ಬರುವ ಮೂಲಕ ಸದ್ಭಕ್ತರು ಶ್ರೀ ಗುರುವಿನ ಮೇಲಿರುವ ತಮ್ಮ ಅಪಾರವಾದ ಭಕ್ತಿ ಗೌರವಗಳನ್ನು ವ್ಯಕ್ತಪಡಿಸಿ ಸಂತೋಷ ಪಡುತ್ತಾರೆ. ಅದೂ ಅಲ್ಲದೇ ಗ್ರಾಮಸ್ಥರೆಲ್ಲರಿಗೂ ಶ್ರೀ ಗುರುವಿನ ದರ್ಶನ ಮಾಡಿಸುತ್ತಾರೆ ಶ್ರೀ ಸಿದ್ಧ ಲಿಂಗೇಶ್ವರ ದೇವಸ್ಥಾನಕ್ಕೆ ಹೋಗಿ ಅಲ್ಲಿಂದ ಶ್ರೀ ಹಿರೇಮಠದ ಮುಂದೆ ಹಾಯ್ದು ಮರಳಿ ಪಡದಪ್ಪಜ್ಜನ ಗದ್ದಿಗೆಗೆ ಬರುತ್ತಾರೆ. ಪಲ್ಲಕ್ಕಿ ಉತ್ಸವವು ಮರಳಿ ಪಡದಪ್ಪಜ್ಜನ ಗದ್ದಿಗೆಗೆ ಆಗಮಿಸಿದಾಗ ಅಲ್ಲಿ ನಡೆಯುವ ಮಹಾ ಮಂಗಲದೊಂದಿಗೆ ಜಾತ್ರೆಯು ಮುಕ್ತಾಯಗೊಳ್ಳುತ್ತದೆ.



## ಮಂಗಳಾರತಿ

ವೈರಾಗ್ಯ ಮೂರ್ತಿಯೇ
ಹಂಚಿನಾಳ ಕೀರ್ತಿಯೆ
ಬೆಳಗುವೆನು ಆರತಿಯ
ನಿಮ್ಮ ಪಾದ ಕಮಲಕೆ, ನಿಮ್ಮ ಪಾದ ಕಮಲಕೆ ।। ಪಲ್ಲವಿ ।।

ಗುರುವಿನಿಂದ ದೀಕ್ಷೆ ಪಡೆದು
ಸಾಧಕನು ನೀನಾಗಿ
ಷಟ್‌ಸ್ಥಲಗಳ ದಾಟುತ್ತ
ನಡೆದ ಶಿವಯೋಗಿಯೇ, ಶಿವಯೋಗಿಯೇ ||೧||

ಗುರುವು ಬೇಗ ಮರೆಯಾಗಲು
ಅರಿವಿನ ಪಥದಲ್ಲಿ
ಏಕಾಂಗಿಯಾಗಿ ನಡೆದ
ಸ್ವಯಂ ಸಿದ್ಧಲಿಂಗವೇ, ಸಿದ್ಧಲಿಂಗವೇ ||೨||

ಗುರುವಿನ ಉತ್ತರಾಧಿ
ಕಾರಿಯಾಗಿ ನೀನು ಬಂದು
ಪಟ್ಟದಾಧಿಕಾರ
ವಹಿಸಿಕೊಂಡ ಪಟ್ಟದಯ್ಯನೆ, ಪಟ್ಟದಯ್ಯನೇ ||೩||

ವಂಶದ ಬಳ್ಳಿಯು ಉಳಿಸಲು
ಬಾ ಎಂದರೆ
ಅದು ಶಿವನ ಪಾಲಿಗೆ
ನನ್ನ ಧರ್ಮ ನನಗೆಂದು, ಸ್ಥಿರವಾಗಿ ನಿಂತವನೆ ||೪||

ಅಳಿಯುಲಿರುವ ವಂಶದ
ಉಳಿವಿನ ಹೊಣೆಯನ್ನು
ಶಿವನ ಮೇಲೆ ಹೊರಿಸಿದ
ವೀರ ಸಂನ್ಯಾಸಿಯೇ, ವೀರ ಸಂನ್ಯಾಸಿಯೇ ||೫||

# ಪ್ರಕಟಿತ ಸಾಹಿತ್ಯ ಸಂಗ್ರಹ

## ಭಾಗ ಒಂದು

೧) "ಶ್ರೀ ಶಿವಸಹಸ್ರ ನಾಮಾವಳಿ, ಶಿವಾಷ್ಟೋತ್ತರ ಮೊದಲಾದ ಸ್ತೋತ್ರಗಳು" ಎಂಬ ಹೆಸರಿನ ಚಿಕ್ಕ ಪುಸ್ತಕ.

ಇದು ಕನ್ನಡಲ್ಲಿ ಇರುತ್ತದೆ. ಇದು ಕ್ರಿ. ಶ. ೧೯೧೫ರಲ್ಲಿ ವೆ. ಗೋಪಾಲಶೆಟ್ಟಿ, ಶ್ರೀ ಲಕ್ಷ್ಮಿನಾರಾಯಣ ವಿಲಾಸ ಬುಕ್ ಡಿಪೋ, ಇವರಿಂದ ಪ್ರಕಾಶಿಸಲ್ಪಟ್ಟಿರುತ್ತದೆ.

೨) "ಶ್ರೀ ರುದ್ರಾಧ್ಯಾಯ" ಎಂಬ ಹೆಸರಿನ ಚಿಕ್ಕ ಪುಸ್ತಕ (ಕನ್ನಡದಲ್ಲಿರುವುದು)

೩) "ಅಥ ವೀರಭದ್ರ ಸಹಸ್ರ ನಾಮಾವಳಿ" ಎಂಬ ಚಿಕ್ಕ ಪುಸ್ತಕ.

ಇದು ಕನ್ನಡದಲ್ಲಿ ಇರುತ್ತದೆ. ಬಸವಲಿಂಗಪ್ಪಾ ಚನ್ನವೀರಪ್ಪಾ ಕಾಗತಿ ಇವರಿಂದ ರಚಿಸಲ್ಪಟ್ಟಿರುವ ಇದು ಬಳವಂತ ರಾಮಚಂದ್ರ ಸೋಹನಿ, ಇವರಿಂದ ತಮ್ಮ "ಶ್ರೀ ಶಾಂತಾದುರ್ಗಾ ಪ್ರಕಾಶ" ಎಂಬ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿರುತ್ತದೆ.

೪) "ಪಂಚಾಚಾರ್ಯರ ವಂಶಾವಳಿ" ಎಂಬ ಹೆಸರಿನ ಚಿಕ್ಕ ಪುಸ್ತಕ.

ಇದು ಕನ್ನಡದಲ್ಲಿ ಇರುತ್ತದೆ. ಇದು ಶ್ರೀ ಅದೀಗ ಪಂಡಿತ, ಇವರಿಂದ ಪರಿಶೋಧಿಸಲ್ಪಟ್ಟು, ಮದರಾಸದ ಚಿತ್ತೂರ ಗುರುಸ್ವಾಮಿ ಮೊದಲಿಯಾರ ಇವರ ಸ್ವಕೀಯ ಕವಿರಂಜನೀ ಮುದ್ರಾಕ್ಷರ ಶಾಲೆಯಲ್ಲಿ, ಬಳ್ಳಾರಿಯಲ್ಲಿರುವ ಚಿತ್ತೂರ ಅಪ್ಪಾಸ್ವಾಮಿ ಮೊದಲಿಯಾರ ಇವರಿಂದ ಅಚ್ಚು ಹಾಕಿಸಿ ಕ್ರಿ. ಶ. ೧೮೮೮ ರಲ್ಲಿ ಪ್ರಕಾಶಿಸಲ್ಪಟ್ಟಿರುತ್ತದೆ.

೫) ಪಂಚಕೃತ್ಯಾಧೀಶ್ವರರ ಉತ್ಪತ್ತಿ,
ಲಿಂಗಾಯತ ಮತದ ಉತ್ಪತ್ತಿ,
ಮುಂತಾದ ವಿಷಯಗಳನ್ನು ಒಳಗೊಂಡಿರುವ ಪುಸ್ತಕದ ಕೆಲವು ಭಾಗವು.

೬) ಪಂಚಾಂಗಗಳು (ನಾಲ್ಕು)

ಇವುಗಳಲ್ಲಿ ಎರಡು ಪಂಚಾಂಗಗಳು ಮರಾಠಿಯಲ್ಲಿ ಇರುತ್ತವೆ. ಈ ಎರಡರಲ್ಲಿ ಒಂದು ಬಾಳಕೃಷ್ಣ ಪಾಠಕ, ಬುಕ್ ಸೆಲರ್ಸ ಮತ್ತು ಪಬ್ಲಿಶರ್ಸ, ಮೋತಿ ಬಾಜಾರ, ಮುಂಬೈ ಇವರಿಂದ ಪ್ರಕಾಶಿಸಲ್ಪಟ್ಟಿದ್ದರೆ, ಇನ್ನೊಂದು ಪುರಂದರೆ ಆ್ಯಂಡ್ ಕಂಪನಿ ಬುಕ್ ಸೆಲರ್ಸ ಆ್ಯಂಡ್ ಪಬ್ಲಿಶರ್ಸ, ಮಾಧವ ಭಾಗ ಮುಂಬೈ-೪ ಇವರಿಂದ ಪ್ರಕಾಶಿಸಲ್ಪಟ್ಟಿರುತ್ತದೆ. ಮೂರನೆಯ ಪಂಚಾಂಗವು ಕನ್ನಡ ಭಾಷೆಯಲ್ಲಿ ಇದ್ದು ಇದನ್ನು ಹೂಲಿ ಗ್ರಾಮದ ಪಂಚ ವರ್ಣ ಬೃಹನ್ಮಠದವರು ಪ್ರಕಾಶಿಸುತ್ತಾರೆ. ಇದು ಕ್ರಿ. ಶ. ೧೯೨೮ ನೇ ಇಸ್ವಿಯ ಪಂಚಾಂಗವಿರುತ್ತದೆ. ಇನ್ನು ನಾಲ್ಕನೆಯ ಪಂಚಾಂಗವು ಕನ್ನಡ ಭಾಷೆಯಲ್ಲಿ ಇರುತ್ತದೆ. ಇದು ಶ್ರೀ ಶಕೆ ೧೮೧೬ ಅಂದರೆ ಕ್ರಿ. ಶ. ೧೮೯೪-೯೫ ನೇ ಇಸ್ವಿಯ ಪಂಚಾಂಗವಿರುತ್ತದೆ. ಇದು ಸವಣೂರಿನಲ್ಲಿರುವ ಕೃಷ್ಣ ಜೋಶಿ ಇವರ ಶಿಷ್ಯ ಮಲ್ಹಾರ ಜೋಶಿ ಇವರಿಂದ ತಯಾರಿಸ ಲ್ಪಟ್ಟಿರುತ್ತದೆ. ಇದನ್ನು ಸವಣೂರ ಬಾಲ ಪ್ರಸಾದ, ಶಿದದಯಾರ್ ಮಿಶರ, ಇವರು ಶಿರಸಿಯಲ್ಲಿರುವ ತಮ್ಮ "ಜ್ಞಾನ ಚಂದ್ರೋದಯ" ಶಿಲಾಛಾಪ ಖಾನೆಯಲ್ಲಿ ಛಾಪಿಸಿ ತಾರೀಖು ೨೫-೯-೧೮೯೪ ರಂದು ಪ್ರಸಿದ್ಧಿ ಪಡಿಸಿರು ತ್ತಾರೆ. ಇದು ಬಳ್ಳಾರಿಯ ನಿರಂಜನಮುರಿ ಎಂಬವರಿಂದ ಹಂಚಿನಾಳ ಹಿರೇಮಠದ ಪಟ್ಟದ್ದೇವರಿಗೆ ಬಂದಿರುತ್ತದೆ.

## ಭಾಗ ಎರಡು

೧) ಕೈವಲ್ಯ ಪದ್ಧತಿ, ಅರವತ್ತುಮೂರು ಮಂದಿ ಪುರಾತನರ ತ್ರಿವಿಧಿ ಮತ್ತು ಪರಮಾರ್ಥ ಗೀತೆ ಇವುಗಳನ್ನು ಒಳಗೊಂಡಿರುವ ಪುಸ್ತಕ.

ಇದು ಕನ್ನಡದಲ್ಲಿ ಇದ್ದು, ಶ್ರೀಮನ್ನಿಜಗುಣ ಶಿವಯೋಗಿಗಳಿಂದ ರಚಿ ಸಲ್ಪಟ್ಟ ಮೂರು ಕೃತಿಗಳನ್ನು ಒಳಗೊಂಡಿರುತ್ತದೆ.

ಶ್ರೀಮನ್ ನಿಜಗುಣ ಶಿವಯೋಗಿಗಳು ರಚಿಸಿದ 'ಕೈವಲ್ಯ ಪದ್ಧತಿ' ಎಂಬ ಗ್ರಂಥವು ಶಿವಕಾರುಣ್ಯ ಸ್ಥಲ, ಜೀವಸಂಬೋಧನ ಸ್ಥಲ, ನೀತಿ ಕ್ರಿಯಾಚರ್ಯಾಸ್ಥಲ, ಯೋಗ ಪ್ರತಿಪಾದನ ಸ್ಥಲ ಮತ್ತು ಜ್ಞಾನ ಪ್ರತಿ ಪಾದನ ಸ್ಥಲ-ಎಂಬ ಒಟ್ಟು ಐದು ಮುಖ್ಯ ವಿಭಾಗಗಳನ್ನು ಒಳಗೊಂಡಿದೆ. ಮೊದಲನೆಯ ಎರಡು ಸ್ಥಲಗಳಲ್ಲಿ ಹೆಚ್ಚು ಭಾವ ಪ್ರಧಾನವಾದ ಹಾಡುಗ

ಳನ್ನು ನಾವು ಕಾಣಬಹುದು. ಜೀವನು ಶಿವನ ಕರುಣೆಯನ್ನು ಹಾರೈಸುವುದು ಮತ್ತು ತನ್ನನ್ನೇ ತಾನು ಎಚ್ಚರಿಸಿಕೊಳ್ಳುವುದು ಇವೇ ಆ ಶಿವಕಾರುಣ್ಯ ಸ್ಥಲದಲ್ಲಿ ಇರುವ ಮುಖ್ಯವಾದ ಅಂಶಗಳು. ಅನಂತರ ಬರುವ ಜೀವ ಸಂಬೋಧನ ಸ್ಥಲದಲ್ಲಿ ಪ್ರಪಂಚದ ದುಃಖವನ್ನು ಕಂಡು ಪರಿತಾಪ ಮತ್ತು ಆತ್ಮ ಜಾಗೃತಿಯ ನಿರೀಕ್ಷೆಗಳು ಬರುತ್ತವೆ. ಈ ದುಃಖದಿಂದ ಪಾರಾಗುವ ಮಾರ್ಗವು ಮುಂದಿನ ಮೂರು ಸ್ಥಲಗಳಲ್ಲಿ ಬರುತ್ತದೆ. ಯೋಗ ಪ್ರತಿಪಾದನ ಸ್ಥಲದಲ್ಲಿ ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ ಮತ್ತು ಶಿವಯೋಗ ಎಂಬ ಐದು ಉಪಭಾಗಗಳಿರುತ್ತವೆ ಯೋಗ ಪ್ರತಿಪಾದನ ಸ್ಥಲದಲ್ಲಿ ನಿಜಗುಣರ ಮನೋಧರ್ಮವನ್ನು ನಾವು ಸ್ಪಷ್ಟವಾಗಿ ಕಂಡುಕೊಳ್ಳಬಹುದು ಅವರ ಶಿವಾದ್ವೈತದ ಸ್ವರೂಪವು ಅಲ್ಲಿ ಗೋಚರವಾಗುತ್ತದೆ. ಅಲ್ಲಿ ಅವರು ಎಲ್ಲ ಯೋಗಗಳ ಶಿಖರ ಶಿವಯೋಗ ಎಂಬುದನ್ನು ಅನುಭಾವಪೂರ್ವಕವಾಗಿ ಕಂಡು ನುಡಿದಿರುವರು. ಇನ್ನು ಕೊನೆಯದಾದ ಜ್ಞಾನ ಪ್ರತಿಪಾದನ ಸ್ಥಲವು ಜ್ಞಾನಯೋಗದ ವ್ಯಾಪಕವಾದ ಶಕ್ತಿಯನ್ನು ಕುರಿತು ಹೇಳುತ್ತದೆ. "ಜ್ಯೋತಿ ಬೆಳಗುತಿದೆ........" ಎಂಬ ಮಂಗಳ ಗೀತೆಯು ಬಲು ಅರ್ಥಗರ್ಭಿತವಾಗಿಯೂ, ಮತ್ತು ಸುಂದರವಾಗಿಯೂ ಇರುವುದು.

ಶಂಭುಲಿಂಗನ ಬೆಟ್ಟದ ಬಳಿ ಇರುವ ಕುಂತೂರು ಪ್ರಭುದೇವರ ಗುಡ್ಡದಲ್ಲಿ ಪ್ರಕೃತಿ ನಿರ್ಮಿತವಾದ ಅನೇಕ ಗವಿಗಳು ಇವೆಯಂತೆ. ಅವುಗಳನ್ನು ಅರವತ್ತುಮೂರು ಮಂದಿ ಪುರಾತನರ ಗವಿಗಳು ಎಂಬುದಾಗಿ ಕರೆಯುತ್ತಾರೆ. ಆ ಅರವತ್ತುಮೂರು ಮಂದಿ ಪುರಾತನರು ಒಬ್ಬೊಬ್ಬರೂ ಒಂದೊಂದು ಮಾರ್ಗದಿಂದ ಶಿವನ ಸಾಕ್ಷಾತ್ಕಾರವನ್ನು ಪಡೆದ ಮಹಾನುಭಾವರು. ಅವರ ಪುಣ್ಯ ಚರಿತ್ರೆಯನ್ನು ನಿಜಗುಣ ಶಿವಯೋಗಿಗಳು ತ್ರಿಪದಿಗಳ ರೂಪದಲ್ಲಿ ಬರೆದಿರುವರು. ಆ ಅರವತ್ತುಮೂರು ಮಂದಿ ಪುರಾತನರ ತ್ರಿವಿಧಿಯು ತಿರುನೀಲಕಂಠರ ಸ್ತುತಿಯಿಂದ ಪ್ರಾರಂಭವಾಗುತ್ತದೆ, ಮತ್ತು ಒಟ್ಟು ಎಪ್ಪತ್ತೇಳು ತ್ರಿಪದಿಗಳನ್ನು ಒಳಗೊಂಡಿರುತ್ತದೆ.

ಇನ್ನು "ಪರಮಾರ್ಥ ಗೀತೆ"ಯು ಪ್ರಥಮ ಗತಿ, ದ್ವಿತೀಯ ಗತಿ, ತೃತೀಯ ಗತಿ,......... ....ಎಂಬುದಾಗಿ ಒಟ್ಟು ಹನ್ನೊಂದು ಭಾಗಗಳನ್ನು ಒಳಗೊಂಡಿರುವುದು. ಅವೆಲ್ಲವುಗಳಲ್ಲಿ ಒಟ್ಟು ೧೨೧ ನಿರೂಪಣೆಗಳು ಇರುತ್ತವೆ.

೨) 'ಪರಮಾನುಭವ ಬೋಧೆ' ಎಂಬ ಹೆಸರಿನ ಪುಸ್ತಕ.

ಇದೂ ಸಹ ಶ್ರೀ ನಿಜಗುಣ ಶಿವಯೋಗಿಗಳಿಂದ ರಚಿಸಲ್ಪಟ್ಟಿದೆ. ಕನ್ನಡದಲ್ಲಿರುವ ಇದು ಬಳ್ಳಾರಿಯ ಕರ್ನಾಟಕ ಬುಕ್ ಡಿಪೋ ಎಜಂಟ ಶ್ರೀ ಶಿವಲಿಂಗ ಶೆಟ್ಟಿ ಇವರಿಗಾಗಿ, ಕರ್ನಾಟಕ ಬುಕ್ ಡಿಪೋದ ಮುದ್ರಾಯಂತ್ರದಲ್ಲಿ ಮುದ್ರಿತವಾಗಿ ಕ್ರಿ.ಶ. ೧೯೧೪ ರಲ್ಲಿ ಪ್ರಕಾಶಿಸಲ್ಪಟ್ಟಿರುತ್ತದೆ.

'ಪರಮಾನುಭವ ಬೋಧೆಯು' ಒಟ್ಟು ಆರು ಸಂಧಿಗಳನ್ನು ಒಳಗೊಂಡಿರುವುದು. ಈ ಗ್ರಂಥವು ಯಾಜ್ಞವಲ್ಕ್ಯ ಮತ್ತು ಮೈತ್ರೇಯಿ ಇವರ ಸಂವಾದ ರೂಪದಲ್ಲಿ ಇರುತ್ತದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಬರುವ ಯಾಜ್ಞ್ಯವಲ್ಕ್ಯ ಮತ್ತು ಮೈತ್ರೇಯಿ ಇವರುಗಳ ಸಂಭಾಷಣೆಯೇ ನಿಜಗುಣರ ಈ ಗ್ರಂಥಕ್ಕೆ ಪ್ರಚೋದನೆಯಾಗಿರುವುದು. ನಿಜಗುಣ ಶಿವಯೋಗಿಗಳು ಈ ಗ್ರಂಥದಲ್ಲಿ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿರುವರು.

೩) "ಸಪ್ಪಣ್ಣ ಸ್ವಾಮಿಗಳ ಸಟೀಕಾ ಕೈವಲ್ಯ ಕಲ್ಪವಲ್ಲರೀ" ಎಂಬ ಪುಸ್ತಕ.

ಈ ಗ್ರಂಥವು ಕನ್ನಡದಲ್ಲಿ ಇದ್ದು, ಕಲ್ಯಾಣ ಪ್ರಾಂತದೊಳು ಹುಟ್ಟಿ ಮಹಾಶಿವಯೋಗಿ ಎನಿಸಿಕೊಂಡು ಅನಿತಸಾಧಾರಣವಾದ ಯಶಸ್ಸನ್ನು ಸಂಪಾದಿಸಿದ, ಸಪ್ಪಣ್ಣ ಸ್ವಾಮಿಯೆಂಬ ಲೋಕರೂಢನಾಮದಿಂದ ಶೋಭಿಸುವ. ಸರ್ಪಭೂಷಣನೆಂಬ ಶಿವಯೋಗಿಯಿಂದ ರಚಿಸಲ್ಪಟ್ಟಿರುತ್ತದೆ. ಇದಕ್ಕೆ ಬೆಂಗಳೂರು, ದೊಡ್ಡಬೆಲೆ ನಾರಾಯಣ ಶಾಸ್ತ್ರಿಯವರು ಸಟೀಕಾ ತಾತ್ಪರ್ಯವನ್ನು ಬರೆದಿರುವರು. ಇದು ಕೆ. ಎಸ್. ಕೃಷ್ಣ ಸ್ವಾಮಿ ಆ್ಯಂಡ್ ಸನ್ಸ್, ಕರ್ನಾಟಕ ಬುಕ್ ಡಿಪೋ ಪ್ರೆಸ್, ಬಳ್ಳಾರಿ ಇವರಿಂದ ಕ್ರಿ.ಶ. ೧೯೨೧ ರಲ್ಲಿ ಪ್ರಕಾಶಿಸಲ್ಪಟ್ಟಿದೆ.

೪) "ಶ್ರೀಮತ್ ಪ್ರಸಾದ ಚಿಂತಾಮಣಿ" ಎಂಬ ಹೆಸರಿನ ಪುಸ್ತಕ

ಇದು ಕನ್ನಡದಲ್ಲಿ ಇದ್ದು, ಗುರುಲಿಂಗಪ್ಪಾ ವಿರುಪಾಕ್ಷಪ್ಪಾ ನಂದಗಾವಿ ಇವರ ಬುಕ್ ಡಿಪೋ, ಮಹಾಲಿಂಗಪುರ, ಇವರಿಂದ ಕ್ರಿ. ಶ. ೧೯೦೨ ರಲ್ಲಿ ಪ್ರಕಾಶಿಸಲ್ಪಟ್ಟದೆ. ಈ ಗ್ರಂಥವು ಪ್ರಸಾದದ ಮಹತ್ವವನ್ನು ಕುರಿತು ತಿಳಿಸುತ್ತದೆ.

೫) "ಕುಮಾರ ಸಂಭವ" ಎಂಬ ಪುಸ್ತಕದ ಕೆಲವು ಪುಟಗಳು.

ಮಹಾಕವಿ ಕಾಳಿದಾಸನಿಂದ ರಚಿಸಲ್ಪಟ್ಟ ಈ ಗ್ರಂಥದ ನಾಲ್ಕನೆ ಸರ್ಗದ ಕೆಲವು ಪುಟಗಳು ಮಾತ್ರ ಇರುತ್ತವೆ. ಇದು ಸಂಸ್ಕೃತ ಭಾಷೆಯಲ್ಲಿರುವ ಕಾವ್ಯ.

೬) "ಶಿವಯೋಗ ಮಂದಿರದ ಸಮಾಚಾರವೇನು ?" ಎಂಬ ಹೆಸರಿನ ಚಿಕ್ಕ ಪುಸ್ತಕ.

ಇದು ಕನ್ನಡದಲ್ಲಿ ಇದ್ದು ಸುಮಾರು ಕ್ರಿ. ಶ. ೧೯೨೧ ರಲ್ಲಿ ಪ್ರಕಾಶಿಸಲ್ಪಟ್ಟಿರುತ್ತದೆ. ಈ ಚಿಕ್ಕ ಪುಸ್ತಕವು ಕ್ರಿ. ಶ. ೧೯೦೯ ರಲ್ಲಿ ಪೂಜ್ಯ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳಿಂದ ಸ್ಥಾಪಿಸಲ್ಪಟ್ಟ ಶಿವಯೋಗ ಮಂದಿರವನ್ನು ಕುರಿತು ಶ್ರೀ ಬಿ. ಗುರುಸಿದ್ಧ ಶಾಸ್ತ್ರಿಗಳಿಂದ ಬರೆಯಲ್ಪಟ್ಟಿದೆ. ಹಂಚಿನಾಳ ಹಿರೇಮಠಕ್ಕೆ ಸಂಬಂಧಿಸಿದ ಪುಸ್ತಕಗಳ ಗಂಟಿನಲ್ಲಿ ಇರುವ ಈ ಪುಸ್ತಕದ ಪ್ರಾರಂಭದಲ್ಲಿ ಲೇಖಕರು ಶಿವಯೋಗ ಮಂದಿರವನ್ನು ಸ್ಥಾಪನೆ ಮಾಡುವ ಕಾಲದಲ್ಲಿ ಅದರ ಸಂಸ್ಥಾಪಕರು ಇಟ್ಟುಕೊಂಡಿದ್ದ ಹತ್ತು ಉದ್ದೇಶಗಳನ್ನು ತಿಳಿಸಿರುವರು. ನಂತರದ ಭಾಗದಲ್ಲಿ ಶಿವಯೋಗ ಮಂದಿರವು ಸ್ಥಾಪನೆಯಾದ ನಂತರದ ಹನ್ನೆರಡು ವರ್ಷಗಳ ಕಾಲಾವಧಿಯಲ್ಲಿ ಆ ಶಿವಯೋಗ ಮಂದಿರವು ತನ್ನ ಧ್ಯೇಯೋದ್ದೇಶಗಳನ್ನು ಸಾಧಿಸುವಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ಎಂಬುದನ್ನು ಕುರಿತು ಚರ್ಚಿಸಿರುವರು.

೭) "ಸುಧಾರಕ'' (ರಿಫಾರ್ಮರ) ಎಂಬ ಹೆಸರಿನ ಸಮಾಚಾರ ಪತ್ರಿಕೆಯು

ಇದು ಕ್ರಿ.ಶ. ೧೮೯೬ನೇ ಇಸ್ವಿಯ ನವೆಂಬರ ತಿಂಗಳಿನ ೨೩ ನೇ ತಾರೀಖು ಸೋಮವಾರ ದಿವಸ ಪೂನಾದಿಂದ ಪ್ರಕಟವಾದ ವಾರ ಪತ್ರಿಕೆ

ಇರುತ್ತದೆ. ಇದು ಇಂಗ್ಲೀಷ ಮತ್ತು ಮರಾಠಿ ಭಾಷೆಗಳಲ್ಲಿ ಪ್ರಕಟಗೊಳ್ಳುವ ದ್ವಿಭಾಷಾ ಪತ್ರಿಕೆಯಾಗಿದೆ. ಕ್ರಿ. ಶ. ೧೮೮೫ರಲ್ಲಿಯೇ ಭಾರತೀಯರೆಲ್ಲರ ಹಿತರಕ್ಷಣೆಗಾಗಿ ಭಾರತ ರಾಷ್ಟ್ರೀಯ ಕಾಂಗ್ರೆಸು ಜನ್ಮ ತಾಳಿತ್ತು. ಭಾರತೀಯರಲ್ಲಿ ಜಾಗೃತಿಯನ್ನು ಮೂಡಿಸಿ, ರಾಷ್ಟ್ರೀಯತೆಯ ಬೀಜವನ್ನು ಬಿತ್ತುವ ಕಾರ್ಯದಲ್ಲಿ ಕಾಂಗ್ರೆಸಿನಂತೆಯೆ ಆಗಿನ ಕಾಲದ ಸಮಾಚಾರ ಪತ್ರಿಕೆಗಳೂ ಸಹಿತ ಬಲು ಮಹತ್ವದ ಪಾತ್ರವನ್ನಾಡಿವೆ ಎಂಬುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಆ ಕಾಲದಲ್ಲಿ ಸಮಾಚಾರ ಪತ್ರಿಕೆಗಳು ರಾಷ್ಟ್ರೀಯ ತೀರ್ಪುಗಾರರಂತಿದ್ದವು. "ಕೇಸರಿ" ಗಳಂತಹ ಸಮಾಚಾರ ಪತ್ರಿಕೆಗಳನ್ನು ತರಿಸಿಕೊಂಡು ಹಳ್ಳಿಗಳಲ್ಲಿಯ ಜನರು ತಂಡ ತಂಡಗಳಾಗಿ ಸೇರಿಕೊಂಡು ಓದುತ್ತಿದ್ದರು. ಹಂಚಿನಾಳ ಶ್ರೀ ಹಿರೇಮಠಕ್ಕೆ ಸಂಬಂಧಿಸಿದ ಪುಸ್ತಕಗಳ ಗಂಟಿನಲ್ಲಿ ಇರುವ ಈ "ಸುಧಾರಕ" ಎಂಬ ಹೆಸರಿನ ಪತ್ರಿಕೆಯು ಅದರ ಮಾಲಕ ಶ್ರೀ ಸೀತಾರಾಮ ಗಣೇಶ ದೇವಧರ ಇವರಿಗಾಗಿ ಪೂಣಾದ ಬುಧವಾರಪೇಟೆಯಲ್ಲಿರುವ 'ಶಿರಾಳಕರ ಆ್ಯಂಡ್ ಕಂಪನಿ' ಇವರಿಂದ ತಮ್ಮ ಆರ್ಯವಿಜಯ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಪ್ರಿಂಟ ಮಾಡಲ್ಪಟ್ಟಿರುತ್ತದೆ ಮತ್ತು ಶ್ರೀ ವಾಸುದೇವ ಬಳವಂತ ಪಟವರ್ಧನ ಇವರಿಂದ ಪ್ರಕಾಶಿಸಲ್ಪಟ್ಟಿರುತ್ತದೆ. ಶಿರಸಂಗಿ ಸಂಸ್ಥಾನದ ಸಂಸ್ಥಾನಿಕರು ಬ್ರಿಟೀಷರೊಡನೆ ಹೋರಾಟ ನಡೆಸಲಿಲ್ಲ ಎಂಬ ಕಾರಣದಿಂದಾಗಿ ಅದರ ಆಡಳಿತ ವ್ಯಾಪ್ತಿಗೆ ಒಳಪಟ್ಟಿದ್ದ ಹಂಚಿನಾಳ ಗ್ರಾಮಕ್ಕೂ ಸಹಿತ ಸ್ವಾತಂತ್ರ್ಯ ಹೋರಾಟದ ಬಿಸಿಯು ತಲುಪಲಿಲ್ಲ ಎಂಬುದನ್ನು ನಾವೀಗಾಗಲೇ ಗಮನಿಸಿದ್ದೇವೆ. ಅದರೂ ಸಹಿತ "ಸುಧಾರಕ" ದಂತಹ ರಾಷ್ಟ್ರೀಯತೆಯ ಬೀಜವನ್ನು ಬಿತ್ತಬಲ್ಲ ಸಮಾಚಾರ ಪತ್ರಿಕೆಗಳು ಆ ಕಾಲದಲ್ಲಿ ಹಂಚಿನಾಳ ಗ್ರಾಮಕ್ಕೆ ಬರುತ್ತಿದ್ದವು ಎಂಬುದನ್ನು ನಾವಿಲ್ಲಿ ಗಮನಿಸಬಹುದಾಗಿದೆ. ಈ ಪತ್ರಿಕೆಯು, "ಶ್ರೀ ಮಲ್ಲಪ್ಪಾ ಕಾಸವಾ ಎಸ್ಕ, ಶಿಕ್ಷಕರು, ಹಂಚಿನಾಳ, ತಾಲೂಕ ಪರಸಗಡ, ಪೋಷ್ಟ: ಸವದತ್ತಿ" ಎಂಬ ವಿಳಾಸಕ್ಕೆ ಪೋಷ್ಟ ಮುಖಾಂತರ ಬಂದಿರುತ್ತದೆ. ಈ ಪತ್ರಿಕೆಯಲ್ಲಿರುವ ಅನೇಕ ಸುದ್ದಿಗಳಲ್ಲಿ ಈ ಕೆಳಗಿನ ಸುದ್ದಿಗಳು ಪ್ರಮುಖ ಸುದ್ದಿಗಳಾಗಿರುತ್ತವೆ.

೧) ದಕ್ಷಿಣ ಆಫ್ರಿಕದಲ್ಲಿಯ ಭಾರತೀಯರು (ಸಂಪಾದಕೀಯ)

೨) ಪೂಣಾದ ಡೆಕ್ಕನ್ ಸಭಾ ಮತ್ತು ಸಮಾಚಾರ ಪತ್ರಿಕೆಗಳು, ಮತ್ತು

೩) ಕ್ರಿ.ಶ. ೧೮೯೬ರ ಬರಗಾಲ, ಡೆಕ್ಕನ್ ಸಭಾ ಮತ್ತು ಸರಕಾರ.

## ಕೈಬರಹದಲ್ಲಿದ್ದ ಸಾಹಿತ್ಯ ಸಂಗ್ರಹ

## ಭಾಗ ಒಂದು

೧) ಶ್ರೀ ಗುರು ಸ್ತೋತ್ರ, ಶಿವಾಷ್ಟೋತ್ತರ ನಾಮಾವಳಿ, ಶ್ರೀ ರುದ್ರ ಚಮಕ, ಗಣ ಸಹಸ್ರ ನಾಮಾವಳಿ, ಷೋಡಶೋಪಚಾರ ಮಂತ್ರ, ಮಂಗಳಾಷ್ಟಕ, ಕೆಲವು ಮಂಗಳಾರ್ತಿ ಮತ್ತು ಇತರ ಪದಗಳು.

೨) ಸಂಕ್ಷಿಪ್ತ ಶಿವಪೂಜಾ ವಿಧಿ.

೩) ಶಿವರಾತ್ರಿ ಕಥೆ.

ಕನ್ನಡ ಕಾವ್ಯರೂಪದಲ್ಲಿರುವ ಈ ಶಿವರಾತ್ರಿ ಕಥೆಯು ಶಿವ ಪಾರ್ವತಿಯರ ಸಂವಾದ ರೂಪದಲ್ಲಿ ಇರುತ್ತದೆ. ದೇವೇಂದ್ರನ ಸೇವೆ ಮಾಡಲು ತಪ್ಪಿದ ಓರ್ವ ಗಂಧರ್ವ ಪುರುಷ ಮತ್ತು ಅನೀತಿಯಿಂದ ವರ್ತಿಸಿದ ಓರ್ವ ಸೋಮದತ್ತನೆಂಬ ರಾಜ ಹಾಗೂ ಆತನ ಮಡದಿಯರಿಗೆ ಸಂಬಂಧಿಸಿದ ಕಥಾವಸ್ತುವನ್ನು ಒಳಗೊಂಡಿರುವ ಈ ಕಥೆಯು ಶಿವರಾತ್ರಿ ಆಚರಣೆಯ ಮಹತ್ವವನ್ನು ಮತ್ತು ನಿಜವಾದ ಲಿಂಗಪೂಜಾ ವಿಧಾನವು ಯಾವುದೆಂಬುದನ್ನು ಸುಲಭವಾದ ಶೈಲಿಯಲ್ಲಿ ಚಿತ್ರಿಸುತ್ತದೆ.

ಅನೀತಿಯಿಂದ ವರ್ತಿಸಿದ ಸೋಮದತ್ತನೆಂಬ ರಾಜ ಮತ್ತು ಆತನ ಮಡದಿಯರು ಮುಂದಿನ ಜನ್ಮದಲ್ಲಿ ಚಿಗರಿಗಳಾಗಿ ಜನಿಸಬೇಕಾಗುತ್ತದೆ. ದೇವೇಂದ್ರನ ಸೇವೆ ಮಾಡಲು ತಪ್ಪಿದ ಓರ್ವ ಗಂಧರ್ವ ಪುರುಷನು ತನ್ನ ಮುಂದಿನ ಜನ್ಮದಲ್ಲಿ ಬೇಟೆಗಾರನಾಗಿ ಜನಿಸಬೇಕಾಗುತ್ತದೆ. ಬೇಟೆಗಾರನು ಹಿಂಸೆಯನ್ನೇ ತನ್ನ ಮುಖ್ಯ ಕಾರ್ಯವನ್ನಾಗಿ ಮಾಡಿಕೊಂಡಿರುತ್ತಾನೆ. ಆತನಿಗೆ ಅಹಿಂಸೆಯ ಮಹತ್ವವೇ ಗೊತ್ತಿರುವದಿಲ್ಲ. ಒಂದು ದಿನ ರಾತ್ರಿ ಆ ಬೇಟೆಗಾರನಿಂದ ಆಕಸ್ಮಿಕವಾಗಿ ಲಿಂಗ ಪೂಜೆಯು ಜರುಗುತ್ತವೆ. ಆ ಶಿವಲಿಂಗದ ಸನ್ನಿಧಿಯಲ್ಲಿಯೇ ಆ ಬೇಟೆಗಾರ ಮತ್ತು ಸತ್ಯವಂತರಾಗಿ ನಡೆದು

ಕೊಂಡ ಚಿಗರಿಗಳು ನೀರನ್ನೂ ಕುಡಿಯದೆ, ಆಹಾರವನ್ನೂ ಸೇವಿಸದೇ ಉಪವಾಸ ಮಾಡಬೇಕಾದ ಪರಿಸ್ಥಿತಿ ಬಂದೊದಗುತ್ತದೆ. ಸತ್ಯವಂತರಾಗಿ ವರ್ತಿಸಿದ ಚಿಗರಿಗಳ ಸಹವಾಸದಿಂದ ಅಹಿಂಸೆಯ ಮಹತ್ವವನ್ನು ಅರಿತುಕೊಂಡ ಬೇಟೆಗಾರನ ಮನಸ್ಸಿನಲ್ಲಿ ಪರಿವರ್ತನೆಯಾಗುತ್ತದೆ. ಎಲ್ಲರೂ ಶಿವಲಿಂಗದ ಸನ್ನಿಧಿಯಲ್ಲಿದ್ದುಕೊಂಡು ಉಪವಾಸವನ್ನಾಚರಿಸಿ ಸತ್ಯ ಮತ್ತು ಅಹಿಂಸೆಗಳನ್ನು ಪಾಲಿಸಿ ಶಿವರಾತ್ರಿಯನ್ನಾಚರಿಸುತ್ತಾರೆ. ಈ ಕಾರಣದಿಂದ ಅವರೆಲ್ಲರೂ ಮುಕ್ತಿ ಎಂಬ ಸಂತೃಪ್ತಿಯ, ಸ್ವತಂತ್ರ ಬಾಳುವೆಯನ್ನು ಬಾಳುತ್ತಾರೆ.

## ಭಾಗ ಎರಡು

೧) ಸಮಾಸ ಚಂದ್ರಿಕಾ

ಇದು ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡಿರುತ್ತದೆ. ಇದು ಬಹಳ ಹಳೆಯ ಕಾಲದ್ದೆಂದು ತೋರುತ್ತದೆ. ಬಹುಶಃ ಇದನ್ನು ಶ್ರೀ ಗುರು ಪಡದಯ್ಯ (ಉರ್ಫ ಮಹಾದೇವ) ಶಿವಾಚಾರ್ಯ ಸ್ವಾಮಿಗಳಿಗಿಂತಲೂ ಮೊದಲಿನ ಸ್ವಾಮಿಗಳು ಸಂಗ್ರಹಿಸಿ ಇಟ್ಟಿರಬಹುದು.

೨) ರಟ್ಟ ಮತ ಜ್ಯೋತಿಶಾಸ್ತ್ರ.

೩) "ಅಥ ರೂಪಾವಲಿ ಪ್ರಾರಂಭ" ಎಂಬುದಾಗಿ ಪ್ರಾರಂಭಗೊಳ್ಳುವ ವ್ಯಾಕರಣಕ್ಕೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡಿರುವ ಪುಸ್ತಕ.

ಕೈ ಬರಹದಲ್ಲಿರುವ ಈ ಪುಸ್ತಕವು ಬಹಳ ಹಳೆಯ ಕಾಲದ್ದೆಂದು ತಿಳಿಯುತ್ತದೆ. ಅದರಲ್ಲಿ ಬರೆದ ತಾರೀಖಿನ ಪ್ರಕಾರ ಅದು ಕ್ರಿ. ಶ. ೧೮೬೪ಳ ನೇ ಇಸ್ವಿ (ಶಾಲಿವಾಹನ ಶಕೆ ೧೭೮೬ ರಕ್ತಾಕ್ಷಿನಾಮ ಸಂವತ್ಸರ)ಗಿಂತಲೂ ಮೊದಲಿನ ಕಾಲದಲ್ಲಿ ಬರೆಯಲ್ಪಟ್ಟಿರುತ್ತದೆ. ಇದನ್ನು ಬಹುಶ : ಶ್ರೀ ಗುರು ಚನ್ನಬಸವ ಶಿವಾಚಾರ್ಯ ಸ್ವಾಮಿಗಳು ಸಂಗ್ರಹಿಸಿ ಇಟ್ಟಿರಬಹುದು.

— ● —

## ಜ್ಯೋತಿ ಬೆಳಗುತಿದೆ

(ರಾಗ : ನಾದ ನಾಮಕ್ರಿಯಾ)

ಜ್ಯೋತಿ ಬೆಳಗುತಿದೆ । ವಿಮಲ ಪರಂ
ಜ್ಯೋತಿ ಬೆಳಗುತಿದೆ ॥ ॥ಪಲ್ಲವಿ॥
ಮಾತು ಮನಂಗಳಿಂದತ್ತತ್ತ ಮೀರಿದ ।
ಸಾತಿಶಯದ ನಿರುಪಾಧಿಕ ನಿರ್ಮಲ ॥ ॥ಅ. ಪ.॥

ಶಿವಧರ್ಮನಾಳವೆಂತೆಂಬ ಕಂಬದ ಮೇಲೆ
ಸುವಿವೇಕ ಹೃದಯಾಬ್ಜ ಪ್ರಣತೆಯೊಳು ।
ಸವೆಯದ ಸದ್ಭಕ್ತಿ ರಸತೈಲ ತೀವಿದ
ಪ್ರವಿಮಲ ಕಳೆಯೆಂಬ ವತ್ತಿ ವಿಡಿದು ದಿವ್ಯ ॥೧॥

ಮುಸುಕಿದ ವಿಷಯ ಪತಂಗ ಬಿದ್ದುರುಳೆ, ತಾ
ಮಸ ಬುದ್ಧಿಯೆಂಬ ಕತ್ತಲೆಯುಳಿಯೆ ।
ಮಸಗಿ ಸುಜ್ಞಾನವೆಂತೆಂಬ ಮಹಾಪ್ರಭೆ
ಪಸರಿಸಿ ಮಾಯಾ ಕಾಳಿಕೆ ಪೊರ್ದದಸುಪಮ ॥೨॥

ಪ್ರಣವಾಕಾರದ, ಗುಣ ಮೂರು ಮುಟ್ಟದ
ಗಣನೆಗತೀತಾರ್ಥವನೆ ತೋರುವ ।
ಅಣುಮಾತ್ರ ಚಲನೆಯಿಲ್ಲದ ಮೋಕ್ಷ ಚಿಂತಾ
ಮಣಿಯೆನಿಸುವ ಶಂಭುಲಿಂಗವೆ ತಾನಾದ ॥೩॥

—ಶ್ರೀ ನಿಜಗುಣ ಶಿವಯೋಗಿಗಳು.

# ಪಂಚಾಚಾರ್ಯರ ಭಜಿಸೋ

ಪಂಚಾಚಾರ್ಯರ ಭಜಿಸೋ ಹೇ ಮನುಜ ।
ವಾಂಛಿತ ಫಲಗಳು ಸಿಗುವುವು ಸಹಜ ॥ಪ॥

ಹರಿವಿಧಿಸುರರಿಗೆ ಪರತರ ಲಿಂಗವ ।
ಕರದಿ ಕೊಟ್ಟು ವರಮುಕ್ತಿಯ ತೋರಿದ ॥೧॥

ಸೋಮೇಶ, ಸಿದ್ಧೇಶ, ರಾಮೇಶ, ವಿಶ್ವೇಶ ।
ಶ್ರೀ ಮಲ್ಲಿಕಾರ್ಜುನ ಲಿಂಗಗಳಿಂ ತೋರ್ದ ॥೨॥

ಕುಂಭಜ ಗೌತಮ ಮೊದಲಾದ ಮುನಿಗಳ್ಗೆ ।
ಸಾಂಬತತ್ತ್ವವನೊರೆದು ಪ್ರೇಮದಿಂದಲೆ ಪೊರೆದ ॥೩॥

ಷಡ್ವಿಧಿ, ವೃಷ್ಟಿ, ಲಂಬನ, ಮುಕ್ತಾಗುಚ್ಛ ।
ಪಂಚವರ್ಣ ಸೂತ್ರಂಗಳನು ರಚಿಸಿ ಮೆರೆದ ॥೪॥

ಬ್ರಹ್ಮಚಾರಿ ಮುಖ್ಯ ಚತುರಾಶ್ರಮಂಗಳ್ಗೆ ।
ಬ್ರಹ್ಮ ತತ್ತ್ವವ ಬೀರಿ ಬ್ರಹ್ಮನಲ್ಲಿ ಬೆರೆದ ॥೫॥

—ಶ್ರೀ ಸಿದ್ಧೇಶ್ವರ ಕವಿ.

## ಮಹಾ ಮಂಗಳಾರತಿ

ಎತ್ತುವೆನಾರತಿ ಪರಮ ಜಗದ್ಗುರು
ಪಂಚಾಚಾರ್ಯರಿಗೆ ।
ಜಗದ್ಗುರು ಪಂಚಾಚಾರ್ಯರಿಗೆ ॥ ॥ಪ॥

ಪರಶಿವ ಪಂಚಾಸ್ಯಗಳಿಂದುದಯಿಸಿ
ಪರಮತವನು ಜಯಿಸಿ ।
ಉದಯಿಸಿ ಪರಮತವನು ಜಯಿಸಿ ।
ಪರಿಪೂತವೆನಿಸಿದ ಶಿವಮತವನು
ನೆಲೆಗೊಳಿಸಿದ ಪೂಜ್ಯರಿಗೆ ॥ ॥೧॥

ಅಂಗ ಲಿಂಗಗಳ ತತ್ತ್ವವ ಬೋಧಿಸಿ
ವಿರತಿ ಸಮೂಹಕ್ಕೆ ।
ಬೋಧಿಸಿ ವಿರತಿ ಸಮೂಹಕ್ಕೆ ।
ಲಿಂಗಾನಂದದಿ ಲಿಂಗದೊಳಡಗಿಹ
ಮಹಿಮಾಶೀಲರಿಗೆ ॥ ॥೨॥

ಪಾವನ ಪರತರ ಜಂಗಮರಿಗೆ ಗುರು
ಸಾರ್ವಭೌಮರಾಗಿ ।
ಗುರು ಸಾರ್ವಭೌಮರಾಗಿ ।
ಕವಿ ಶ್ರೀ ಹರೀಶ್ವರ ಹೃದಯ ಕಮಲದೊಳು
ಸಲೆ ನೆಲೆಸಿರುವರಿಗೆ ॥ ॥೩॥

—ಹರೀಶ್ವರ ಕವಿ.

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| XXV | ೧ | ಸಿದ್ಧಡ್ಡಿ | ಸಿದ್ಧರಡ್ಡಿ |
| ೧ | ೨೦ | ಮನಕುಲದ | ಮನುಕುಲದ |
| ೨ | ೧೭ | ಘೋಷಿಸಿರುವ | ಪೋಷಿಸಿರುವ |
| ೩ | ೩ | ಸಕ್ಷಿಂಪ್ತವಾಗಿ | ಸಂಕ್ಷಿಪ್ತವಾಗಿ |
| ೪ | ೫ | ಜಾತಿವಾದಿಗಳು | ಜಾತಿವಾದಗಳು |
| ೬ | ೬ | ಅಸ್ಪ್ರುಶ್ಯತೆಯಿಂದ | ಅಸ್ಪೃಶ್ಯತೆಯಿಂದ |
| ೭ | ೧೫ | ಅಸ್ಪ್ರುಶ್ಯತೆ | ಅಸ್ಪೃಶ್ಯತೆ |
| ೭ | ೨೪ | ಘೋಷಿಸಿಕೊಂಡು | ಪೋಷಿಸಿಕೊಂಡು |
| ೮ | ೧೨ | ಸಂಸ್ಟೆಗಳನು | ಸಂಸ್ಥೆಗಳನ್ನು |
| ೧೫ | ೮ | ನಮ್ಮೆಲ್ಲ | ನಮ್ಮೆಲ್ಲ |
| ೧೭ | ೧೮ | ಶಿವಾದ್ಯೈತ | ಶಿವಾದ್ವೈತ |
| ೧೮ | ೨೩ | ಲಿಂಗಾಗ | ಲಿಂಗಾಂಗ |
| ೨೨ | ೧೬ | ಆವಧಿಯ | ಅವಧಿಯ |
| ೨೨ | ೨೩ | ಸನಿಧಿಯನ್ನು | ಸನ್ನಿಧಿಯನ್ನು |
| ೨೩ | ೬ | ಹೆಚ್ಚುತಾ | ಹೆಚ್ಚುತ್ತಾ |
| ೨೩ | ೧೯ | ಆದ್ವೈತ | ಆದ್ವೈತದ |
| ೨೮ | ೧೮ | ಪಾಲೆಸುತ್ತ | ಪಾಲಿಸುತ್ತ |
| ೨೯ | ೨೬ | ಪೂಜಿಸುನ | ಪೂಜಿಸುವ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨೮ | ೧೦ | ನಿರ್ವಿಹಿಸುತ್ತವೆ | ನಿರ್ವಹಿಸುತ್ತವೆ |
| ೨೯ | ೨೬ | ರಿಕ್ಷಿಸಿಕೊಂಡು | ರಕ್ಷಿಸಿಕೊಂಡು |
| ೩೦ | ೧ | ಪಾಲೆಸುತ್ತ | ಪಾಲಿಸುತ್ತ |
| ೩೨ | ೧೨ | ಪಟ್ಟದಲ್ಲಿ | ಪಟ್ಟಣದಲ್ಲಿ |
| ೩೭ | ೧೫ | ರಟ್ಟರ | ರಟ್ಟರ |
| ೩೭ | ೧೭ | ವಿರ | ವೀರ |
| ೪೧ | ೧೭ | ಲಿಂಗತ್ವದ | ಲಿಂಗತತ್ತ್ವದ |
| ೫೬ | ೯ | ಪೂರ್ವಶ್ರಮದ | ಪೂರ್ವಾಶ್ರಮದ |
| ೬೪ | ೨೪ | ಹಿರೇವಠದ | ಹಿರೇಮಠದ |
| ೬೫ | ೧೯ | ರಾಫವಾಂಕ | ರಾಘವಾಂಕ |
| ೭೩ | ೪ | ಸ್ವಾವಿ | ಸ್ವಾಮಿಗಳ |
| ೯೩ | ೧ | ಜ್ಞಾನ ಅಮತ್ತು | ಅಜ್ಞಾನ ಮತ್ತು |
| ೯೯ | ೧೫ | ಗಳಾಗಿದ್ದರೆ | ಗಳಾಗಿದ್ದಾರೆ |
| ೧೦೬ | ೧೪ | ಪಡೆದಕೊಳ್ಳುತ್ತಾರೆ | ಪಡೆದುಕೊಳ್ಳುತ್ತಾರೆ |
| ೧೧೧ | ೩ | ಸ್ತೋತ | ಸ್ತೋತ್ರ |



# ಈ ಪುಸ್ತಕಗಳು ದೊರೆಯುವ ಸ್ಥಳಗಳು